| | | | | | | |
|---|---|---|---|---|---|---|
| 1 | ಅಭ್ಯರ್ಥಿಯ ಹೆಸರು (ದಪ್ಪ ಅಕ್ಷರಗಳಲ್ಲಿ) | | | | | |
| 2 | ತಂದೆ/ಗಂಡನ ಹೆಸರು | | | | | |
| 3 | ತಾಯಿಯ ಹೆಸರು | | | | | |
| 4 | ಜನ್ಮ ದಿನಾಂಕ | | | | | |
| 5 | ವಯಸ್ಸು (ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದಂದು ಅಭ್ಯರ್ಥಿಯ ವಯಸ್ಸು) | ವರ್ಷಗಳು | ತಿಂಗಳುಗಳು | | ದಿನಗಳು | |
| | | | | | | |
| 9 | ಲಿಂಗ | ಪುರುಷ | | | ಮಹಿಳೆ | |
| | | | | | | |
| 7 | ರಾಷ್ಟ್ರೀಯತೆ | | | | | |
| 8 | ಧರ್ಮ ಮತ್ತು ಜಾತಿ | | | | | |
| 9 | ವೈವಾಹಿಕ ಸ್ಥಿತಿ | ವಿವಾಹಿತ | | | ಅವಿವಾಹಿತ | |
| | | | | | | |
| 10 | ಕೋರುವ ಮೀಸಲಾತಿಗಳು (ಕೋರುವ ಮೀಸಲಾತಿಯನ್ನು ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣ ಪತ್ರದ ಸ್ವಯಂ ಧೃಡೀಕೃತ ನಕಲನ್ನು ಲಗತ್ತಿಸಬೇಕು) | ಸಾಮಾನ್ಯ | ಪ.ಜಾತಿ | ಪ.ಪಂಗಡ | ಪ್ರವರ್ಗ –1 | |
| | | | | | | |
| | | 2ಎ | 2ಬಿ | 3ಎ | 3ಬಿ | |
| | | | | | | |
| 11 | ನೀವು ಈ ಯಾವುದಾದರು ಮೀಸಲಾತಿ ಅಡಿಯಲ್ಲಿ ಬರುತ್ತೀರ? (ಸೇರುವ ಮೀಸಲಾತಿಯನ್ನು ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣ ಪತ್ರದ ಸ್ವಯಂ ಧೃಡೀಕೃತ ನಕಲನ್ನು ಲಗತ್ತಿಸಬೇಕು) | ಗ್ರಾಮೀಣ | ಕ.ಮಾ.ಅ | ಮಾ.ಸೈ | ಅಂ.ಅ | ಯೋ.ನಿ.ಅ. |
| | | | | | | |
| 12 | **ವಿದ್ಯಾರ್ಹತೆ** : (ಸ್ವಯಂ ಧೃಢಿಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | ತೇರ್ಗಡೆಯಾದ ತಿಂಗಳು ಮತ್ತು ವರ್ಷ | ಗರಿಷ್ಟ ಅಂಕಗಳು | ಗಳಿಸಿದ ಅಂಕಗಳು | | |
| | 7ನೇ ತರಗತಿ | | | | | |
| | ಎಸ್.ಎಸ್.ಎಲ್.ಸಿ; | | | | | |
| | ಕನ್ನಡ ಬೆರಳಚ್ಚು (ಕಿರಿಯ ಶ್ರೇಣಿ) | | | | | |
| | ಆಂಗ್ಲ ಬೆರಳಚ್ಚು (ಕಿರಿಯ ಶ್ರೇಣಿ) | | | | | |
| | ಕನ್ನಡ ಬೆರಳಚ್ಚು (ಹಿರಿಯ ಶ್ರೇಣಿ) | | | | | |
| | ಆಂಗ್ಲ ಬೆರಳಚ್ಚು (ಹಿರಿಯ ಶ್ರೇಣಿ) | | | | | |
| | ಕನ್ನಡ ಶೀಘ್ರಲಿಪಿ (ಹಿರಿಯ ಶ್ರೇಣಿ) | | | | | |
| | ಆಂಗ್ಲ ಶೀಘ್ರಲಿಪಿ (ಹಿರಿಯ ಶ್ರೇಣಿ) | | | | | |
| | ಇತರೆ ಯಾವುದೇ ವಿದ್ಯಾರ್ಹತೆ (ಸೂಚನೆ: ಅನ್ವಯಿಸುವ ವಿದ್ಯಾರ್ಹತೆಯ ಅಂಕಣಗಳನ್ನು ಮಾತ್ರ ಭರ್ತಿ ಮಾಡುವುದು) | | | | | |

| | | | |
|---|---|---|---|
| 13 | ನೀವು ಪ್ರಸ್ತುತ ಸರ್ಕಾರಿ ಸೇವೆಯಲ್ಲಿರುವಿರ? (ಸರ್ಕಾರಿ ಸೇವೆಯಲ್ಲಿದ್ದಲ್ಲಿ ನೇಮಕಾತಿ ಪ್ರಾಧಿಕಾರದಿಂದ ಪಡೆದ ನಿರಾಕ್ಷೇಪಣಾ ಪತ್ರದ ನಕಲನ್ನು ಲಗತ್ತಿಸಬೇಕು) | ಹೌದು | ಇಲ್ಲ |
| 14 | ಅಭ್ಯರ್ಥಿಯ ಖಾಯಂ ವಿಳಾಸ ಮತ್ತು ದೂರವಾಣಿ ಸಂಖ್ಯೆ | | |
| 15 | ಅಭ್ಯರ್ಥಿಯ ಅಂಚೆ ವಿಳಾಸ ಮತ್ತು ದೂರವಾಣಿ ಸಂಖ್ಯೆ | | |
| 16 | ನಿಮ್ಮ ಸ್ವವಿಳಾಸವಿರುವ ರೂ.5/– ರ ಅಂಚೆ ಚೀಟಿ ಅಂಟಿಸಿರುವ ಲಕೋಟೆಯನ್ನು ಲಗತ್ತಿಸಿದ್ದೀರ? | | |

ಈ ಮೇಲ್ಕಂಡ ಮಾಹಿತಿಗಳು ಸತ್ಯವಾಗಿರುತ್ತದೆ ಎಂದು ಪ್ರಮಾಣಿಕರಿಸುತ್ತೇನೆ ಹಾಗೂ ಒಂದು ವೇಳೆ ಮೇಲ್ಕಂಡ ಮಾಹಿತಿಗಳು ತಪ್ಪು ಎಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತ್ವವನ್ನು ರದ್ದುಪಡಿಸಬಹುದೆಂದು ಘೋಷಿಸುತ್ತೇನೆ.

ಸ್ಥಳ :

ದಿನಾಂಕ: ಅಭ್ಯರ್ಥಿಯ ಸಹಿ.

ಪಿ.ಆರ್. 375

**ತೋಟಗಾರಿಕೆ ಇಲಾಖೆ**

**ಲಾಲ್‌ಬಾಗ್, ಬೆಂಗಳೂರು–560004**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ತೋಇ/ತೋಅನಿ/ಕ್ಷೇ:ಸ/ಸತೋಅ1/1/2010–11, ದಿನಾಂಕ: 1ನೇ ಜೂನ್ 2010**

2010–2011ನೇ ಸಾಲಿಗೆ ತೋಟಗಾರಿಕೆ ಇಲಾಖೆಯ ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ದಿ ಏಜೆನ್ಸಿ ಅಡಿಯಲ್ಲಿ ಬರುವ ತೋಟಗಾರಿಕೆ ಕ್ಷೇತ್ರ / ನರ್ಸರಿಗಳಲ್ಲಿ ವಿವಿಧ ಯೋಜನೆಗಳಡಿ 1) ಸಪೋಟ ಕಸಿಗಿಡಗಳನ್ನು ಉತ್ಪಾದಿಸಲು ಅವಶ್ಯವಿರುವ ಉತ್ತಮ ಗುಣಮಟ್ಟದ ಕಿರಣಿ ಸಸಿಗಳನ್ನು ಸರಬರಾಜು ಮಾಡಲು, 2) ವಿವಿಧ ಗಿಡಗಳನ್ನು ಉತ್ಪಾದಿಸಲು ಅವಶ್ಯವಿರುವ ವಿವಿಧ ಅಳತೆಯ ಮತ್ತು ಗೇಜ್‌ನ ಉತ್ತಮ ಗುಣಮಟ್ಟದ ಪಾಲಿಥೀನ್ ಚೀಲ ಹಾಗೂ ಪಾಲಿ ಓವನ್ ಸ್ಯಾಕ್‌ಬ್ಯಾಗ್‌ಗಳನ್ನು ಸರಬರಾಜು ಮಾಡಲು ನೈಜ ನರ್ಸರಿದಾರರು / ಉತ್ಪಾದಕರಿಂದ ಟೆಂಡರ್ ಆಹ್ವಾನಿಸಲಾಗಿದ್ದು, ನಿಗದಿತ ಟೆಂಡರ್, ಷರತ್ತು ಮತ್ತು ನಿಬಂಧನೆಗಳು ಹಾಗೂ ಇತರೆ ಮಾಹಿತಿಗಳನ್ನೊಳಗೊಂಡ ಟೆಂಡರ್ ದಾಖಲಾತಿಗಳನ್ನು **ತೋಟಗಾರಿಕೆ ಉಪ ನಿರ್ದೇಶಕರು, (ದ್ರಾಕ್ಷಿ ವಿಭಾಗ) ಲಾಲ್‌ಬಾಗ್, ಬೆಂಗಳೂರು** ರವರ ಕಛೇರಿಯಲ್ಲಿ ಪಡೆಯಬಹುದಾಗಿದೆ. ಆಸಕ್ತಿಯುಳ್ಳವರು ಐಟಂವಾರು ಪ್ರತ್ಯೇಕ ಟೆಂಡರ್ ದಾಖಲಾತಿಗಳನ್ನು ದಿನಾಂಕ:15–6–2010 ರಿಂದ 25–6–2010 ವರೆಗೆ ಕಛೇರಿ ವೇಳೆಯಲ್ಲಿ ವರ್ಗಾವಣೆಯಾಗದ/ ಮರುಪಾವತಿಸದ ಅರ್ಜಿ ಶುಲ್ಕ ರೂ. 1000/– ಅನ್ನು ಯಾವುದೇ ಶೆಡ್ಯೂಲ್ ಬ್ಯಾಂಕಿನಿಂದ **ತೋಟಗಾರಿಕೆ ಉಪ ನಿರ್ದೇಶಕರು (ದ್ರಾಕ್ಷಿ ವಿಭಾಗ) ಲಾಲ್‌ಬಾಗ್, ಬೆಂಗಳೂರು** ರವರ ಹೆಸರಿನಲ್ಲಿ ಪಡೆದ ಡಿ.ಡಿ ಯನ್ನು ಪಾವತಿಸಿ ಪಡೆಯಬಹುದಾಗಿರುತ್ತದೆ. ಟೆಂಡರ್ ಪ್ರಕಟಣೆಯಲ್ಲಿ ನಮೂದಿಸಿರುವಂತೆ ನಿಗಧಿಪಡಿಸಿದ ಪ್ರತ್ಯೇಕ **ಇ.ಎಂ.ಡಿ ಮೊತ್ತವನ್ನು** ಯಾವುದೇ ಶೆಡ್ಯೂಲ್ ಬ್ಯಾಂಕಿನಿಂದ **ತೋಟಗಾರಿಕೆ ಉಪ ನಿರ್ದೇಶಕರು (ದ್ರಾಕ್ಷಿ ವಿಭಾಗ) ಲಾಲ್‌ಬಾಗ್, ಬೆಂಗಳೂರು** ರವರ ಹೆಸರಿನಲ್ಲಿ ಡಿ.ಡಿ ಪಡೆದು, ಭರ್ತಿಮಾಡಿದ ಆಯಾಯ ತಾಂತ್ರಿಕ ಟೆಂಡರ್ ಬಿಡ್ ಜೊತೆಗೆ ಸಲ್ಲಿಸುವುದು. ಭರ್ತಿ ಮಾಡಿದ ಐಟಂವಾರು ಟೆಂಡರ್‌ಗಳ ಮೊಹರಾದ ಲಕೋಟೆಗಳನ್ನು ದಿನಾಂಕ: 26–6–2010 ರ ಸಂಜೆ 5.00 ಗಂಟೆಯೊಳಗೆ ತೋಟಗಾರಿಕೆ ಉಪ ನಿರ್ದೇಶಕರು (ದ್ರಾಕ್ಷಿ ವಿಭಾಗ) ರವರ ಕಛೇರಿಯಲ್ಲಿ ಸಲ್ಲಿಸುವುದು. ಆಯಾಯ ತಾಂತ್ರಿಕ ಹಾಗೂ ಆರ್ಥಿಕ ಬಿಡ್‌ಗಳ ಪ್ರತ್ಯೇಕ ಲಕೋಟೆಗಳನ್ನು ಒಂದೇ ಕವರ್‌ನಲ್ಲಿ ಸಲ್ಲಿಸುವುದು. ಇ.ಎಂ.ಡಿ ಮೊತ್ತವನ್ನು ತಾಂತ್ರಿಕ ಬಿಡ್‌ನೊಂದಿಗೆ ಸಲ್ಲಿಸುವುದು. ತಾಂತ್ರಿಕ ಬಿಡ್ ಇರುವ ಲಕೋಟೆಗಳನ್ನು ದಿನಾಂಕ: 28–6–2010 ರಂದು ಮಧ್ಯಾಹ್ನ 11.00

ಗಂಟೆಗೆ ಇಲಾಖಾ ವತಿಯಿಂದ ರಚಿಸಲಾಗಿರುವ ತಾಂತ್ರಿಕ ಸಮಿತಿಯ ಸದಸ್ಯರು, ಸಂಬಂಧಿಸಿದ ಟೆಂಡರ್‌ದಾರರು / ಅವರ ಅಧಿಕೃತ ಪ್ರತಿನಿಧಿಗಳ ಸಮ್ಮುಖದಲ್ಲಿ ತೆರೆಯಲಾಗುವುದು. ಆರ್ಥಿಕ ಬಿಡ್‌ಗಳನ್ನು ದಿನಾಂಕ: 30–6–2010 ಮಧ್ಯಾಹ್ನ 11.00 ಗಂಟೆಗೆ ತೆರೆಯಲಾಗುವುದು. ಯಾವುದೇ / ಎಲ್ಲಾ ಬಿಡ್ಡುಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಧಿಕಾರವನ್ನು ಕೆಳ ಸಹಿದಾರರು ಹೊಂದಿರುತ್ತಾರೆ.

ತೋಟಗಾರಿಕೆ ನಿರ್ದೇಶಕರು

**Department of Horticulture**

**Lalbagh, Bangalore – 560004**

**TENDER NOTIFICATION**

**No. DH/AdDH/F&N/AHO-1/1/2010-11, Date: 1st June 2010**

The Department of Horticulture for the year 2010-11 invites tenders in prescribed format from reputed, nurseries and producers for supply of 1) Kirni seedlings for propagation of Sapota grafts 2) Polythene covers and poly oven sack bags of different guage and size required for raising different seedlings in Horticultural Farms coming under Karnataka State Horticulture Development Agency, under different schemes. The tender documents containing terms and conditions, technical and quality specifications and other details can be obtained from the office of the Deputy Director of Horticulture (Grapes) Lalbagh, Bangalore. Separate itemwise tender documents will be issued against the requisition from interested firms, from **15-06-2010 to 25-06-2010**, on working hours on payment of non transferable/ non refundable fee of Rs.1000/- by way of demand draft (DD) purchased from any Scheduled bank, drawn in favour of **Deputy Director of Horticulture (Grapes), Lalbagh,** payable at Bangalore.

Completed itemwise separate Technical and financial bids in separate sealed covers addressed to Deputy Director of Horticulture (Grapes), Lalbagh, Bangalore with EMD as specified in the tender notice drawn in favour of **Deputy Director of Horticulture (Grapes), Lalbagh, Bangalore,** purchased from any Scheduled Bank, payable at Bangalore may be submitted latest by **26-06-2010,** before 5.00 pm. **The EMD amount** should be included with the Technical bids. The technical bids will be opened on **28-06-2010** at 11.00 am in the presence of tender committee members & bidders / authorized representatives. The financial bids will be opened at 11.00 am on **30-06-2010.** The undersigned reserves the right to reject any/ all tenders without assigning any reason.

P.R. 391 Director of Horticulture

**KARNATAKA STATE LITERACY MISSION AUTHORITY**

**Department of Mass Education, 6th Cross, Malleshwaram, Bengaluru-560003.**

**Ph. No. 23444870/871, 23313125 Fax No.23565209/23313135**

**E-mail ID: cmekar@gmail.com & cmekar@yahoo.co.in**

**No: C11/KSLMA/CR-30/2009-10, Date: 7th June 2010**

**SHORT TERM TENDER NOTIFICATION**

**(Through e-procurement only)**

1. Tender are invited under two cover system through e-procurement portal from the eligible bidders having their own web offset printing press, for printing and supply of 11 lakh copies each for work package-1 and work package-2 of Balige Belaku Primers in Kannada for the year 2010-11.
2. The last date for submission of tender is on **21.06.2010** before 4.00 pm. Technical bid will be opened at the time and date mentioned in e-procurement portal.
3. EMD and Tender processing fee is to be remitted as per e-procurement portal. EMD will be Rs. 5.00 lakh for single package in the form of online payment as specified.

4. In case of applying for both the packages, than additional Rs. 5.00 lakh (five lakhs ) should be paid by way of a demand draft in the name of Member Secretary, KSLMA payable at Bengaluru.
5. All details can be seen in the tender documents which can be downloaded from http://eproc.karnataka.gov.in.

Member Secretary
Karnataka State Literacy Mission Authority, Bengaluru.

**ಲೋಕಶಿಕ್ಷಣ ಇಲಾಖೆ**

**ರಾಜ್ಯ ಸಾಕ್ಷರತಾ ಮಿಷನ್ ಪ್ರಾಧಿಕಾರ, ಲೋಕ ಶಿಕ್ಷಣ ನಿರ್ದೇಶನಾಲಯ,**
**6ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು – 03.**
**ದೂರವಾಣಿ ಸಂ: 23444870/871, 23313125 ಫ್ಯಾಕ್ಸ್: 23565209/23313135**
**ಇ–ಮೇಲ್ ವಿಳಾಸ: cmekar@gmail.com & cmekar@yahoo.co.in**
**ಸಂಖ್ಯೆ: ಸಿ11/ಕೆಎಸ್ಎಲ್ಎಂಎ/ಸಿಆರ್–30/2009–10, ದಿನಾಂಕ: 7ನೇ ಜೂನ್ 2010**

**ಅಲ್ಪಾವಧಿಯ ಟೆಂಡರ್ ಪ್ರಕಟಣೆ**
**(ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಮಾತ್ರ)**

1. ಸ್ವಂತವಾಗಿ ವೆಬ್ ಆಫ್‌ಸೆಟ್ ಮುದ್ರಣಾಲಯ ಹೊಂದಿರುವವರಿಂದ 2010–11ರ ಸಾಲಿಗೆ ಪ್ರತಿ ಪ್ಯಾಕೇಜಿಗೆ 11 ಲಕ್ಷ ಪ್ರತಿಗಳಂತೆ ಪ್ಯಾಕೇಜ್–1 ಮತ್ತು ಪ್ಯಾಕೇಜ್–2ರಲ್ಲಿ ಬಾಳಿಗೆ ಬೆಳಕು ಪ್ರಾಥಮಿಕೆಗಳನ್ನು ಕನ್ನಡದಲ್ಲಿ ಮುದ್ರಿಸಿ ಸರಬರಾಜು ಮಾಡಲು ಟೆಂಡರ್‌ಗಳನ್ನು e-procurement portal ನಲ್ಲಿ ಕರೆಯಲಾಗಿದೆ.
2. ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ: **21.06.2010**ರ ಸಂಜೆ 4.00 ಗಂಟೆ ತಾಂತ್ರಿಕ ಟೆಂಡರ್ ಅನ್ನು ತೆರೆಯುವ ದಿನಾಂಕ ಮತ್ತು ಸಮಯವನ್ನು e-procurement portal ನಲ್ಲಿ ನಮೂದಿಸಲಾಗಿದೆ.
3. e-procurement portal ನಲ್ಲಿ ತಿಳಿಸಿರುವಂತೆ EMD ಮತ್ತು ಪ್ರಕ್ರಿಯೆ ಶುಲ್ಕವನ್ನು ಸಲ್ಲಿಸಬೇಕು. ಒಂದು ಪ್ಯಾಕೇಜಿನ EMD ಮೊತ್ತ ರೂ 5.00 ಲಕ್ಷಗಳನ್ನು ಅಂತರ್ಜಾಲದ ಮೂಲಕ ಪಾವತಿಸಬೇಕು.
4. ಒಂದು ವೇಳೆ ಎರಡು ಪ್ಯಾಕೇಜಿಗೆ ಟೆಂಡರ್ ಸಲ್ಲಿಸುವುದಾದಲ್ಲಿ, Member Secretary, KSLMA, ಇವರ ಹೆಸರಿನಲ್ಲಿ ಬೆಂಗಳೂರಿನಲ್ಲಿ ಪಾವತಿಯಾಗುವಂತೆ ಹೆಚ್ಚುವರಿ ರೂ. 5.00 ಲಕ್ಷಗಳನ್ನು ಡಿ.ಡಿ ಮೂಲಕ ಪಾವತಿಸಬೇಕು.
5. ಎಲ್ಲಾ ವಿವರಗಳನ್ನು ವೆಬ್‌ಸೈಟ್ ವಿಳಾಸ http://eproc.karnataka.gov.in ನಲ್ಲಿ ಡೌನ್ ಲೋಡ್ ಮಾಡಿಕೊಳ್ಳುವ ಟೆಂಡರ್ ಡಾಕ್ಯುಮೆಂಟ್‌ನಲ್ಲಿ ನೋಡಬಹುದಾಗಿದೆ.

ಸದಸ್ಯ ಕಾರ್ಯದರ್ಶಿ
ಪಿ.ಡಿ. 75 ಕರ್ನಾಟಕ ರಾಜ್ಯ ಸಾಕ್ಷರತಾ ಮಿಷನ್ ಪ್ರಾಧಿಕಾರ, ಬೆಂಗಳೂರು.

**ನಮೂನೆ–1**
**(9ನೇ ನಿಯಮ ನೋಡಿ)**
**ಪೊಲೀಸ್ ಇಲಾಖೆ**
**ಜಿಲ್ಲಾ ಪೊಲೀಸ್ ಕಾರ್ಯಾಲಯ, ಹಾವೇರಿ ಜಿಲ್ಲೆ**
**ಅಧಿಸೂಚನೆ**

ಶ್ರೀ **ಮಲ್ಲಪ್ಪ ಗುಡ್ಡಪ್ಪ ದೊಡ್ಡಕಾರಗೇರ** ಸಿಪಿಸಿ 1229 ಹಾವೇರಿ ಗ್ರಾಮೀಣ ಪೊಲೀಸ್ ಠಾಣೆರವರಿಗೆ ಅವರ ಹೆಸರನ್ನು **ಮಲ್ಲಪ್ಪ ಗುಂಡಪ್ಪ ದೊಡ್ಡಕಾರಗಿ** ಎಂದು ಬದಲಾಯಿಸಲು ಅನುಮತಿ ನೀಡಲಾಗಿದೆ.

ಪಿ.ಡಿ. 68 ಪೊಲೀಸ್ ಅಧೀಕ್ಷಕರು, ಹಾವೇರಿ ಜಿಲ್ಲೆ

**ನಮೂನೆ–1**
**(9ನೇ ನಿಯಮ ನೋಡಿ)**
**ಶಿಕ್ಷಣ ಇಲಾಖೆ**
**ಕ್ಷೇತ್ರ ಶಿಕ್ಷಣಾಧಿಕಾರಿಗಳು ಮುಧೋಳ**
**ಅಧಿಸೂಚನೆ**

ಶ್ರೀ **ನಾಗಯ್ಯ ಶಿವಯ್ಯ ಮಠ** ರವರು B.R.P (ಶಿಕ್ಷಕ) ರಾಗಿ B.E.O & B R C ಕಛೇರಿ ಮುಧೋಳ ಇಲ್ಲಿ ಕೆಲಸ ನಿರ್ವಹಿಸುತ್ತಿದ್ದು ಇವರ ಹೆಸರನ್ನು **ನಾಗಯ್ಯ ಶಿವಯ್ಯ ಹಿರೇಮಠ** ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಲಾಗಿದೆ.

ಪಿ.ಡಿ. 69 ನೇಮಕಾಧಿಕಾರಿಗಳ ಸಹಿ ಮತ್ತು ಪದನಾಮ

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ದಾವಣಗೆರೆ ವಿಭಾಗ, ದಾವಣಗೆರೆ

### ಟೆಂಡರ್ ಪ್ರಕಟಣೆ

**ಸಂಖ್ಯೆ : ಬಿ1.ಬಿಯುಡಿ/ಮೃ.ಆ.ಟೆಂ./ಸಿಆರ್–25/2010–11, ದಿನಾಂಕ: 31ನೇ ಮೇ 2010**

ದಾವಣಗೆರೆ ವಿಭಾಗದ ವ್ಯಾಪ್ತಿಯಲ್ಲಿರುವ ಇಂದಿರಾ ಪ್ರಿಯದರ್ಶಿನಿ ಕಿರು ಮೃಗಾಲಯ, ಆನಗೋಡು. ಇಲ್ಲಿನ ಪ್ರಾಣಿ ಪಕ್ಷಿಗಳಿಗೆ 2010–11ನೇ ಸಾಲಿಗೆ ಈ ಕೆಳಗಿನ ಅನುಸೂಚಿಯಲ್ಲಿ ನಮೂದಿಸಲ್ಪಟ್ಟಿರುವ ಅಂದಾಜು ಪ್ರಮಾಣದ ಉತ್ತಮ ಗುಣಮಟ್ಟದ ಆಹಾರ ಪದಾರ್ಥಗಳನ್ನು ಪ್ರತಿ ದಿನದ ಅಗತ್ಯಕ್ಕನುಗುಣವಾಗಿ ಒದಗಿಸಲು, ಈ ವಿಭಾಗದಲ್ಲಿ ನೊಂದಾಯಿತ ಅರಣ್ಯ ಗುತ್ತಿಗೆದಾರರಿಂದ ಮೊಹರಾದ ಲಕೋಟೆಗಳಲ್ಲಿ ಟೆಂಡರ್‌ಗಳನ್ನು ದಿನಾಂಕ : 21–06–2010 ರಂದು ಆಹ್ವಾನಿಸಲಾಗಿದೆ. ಟೆಂಡರ್‌ಗಳನ್ನು ಸದರಿ ದಿನದಂದು ಅಪರಾಹ್ನ **4.30** ಗಂಟೆಯವರೆಗೆ ಸ್ವೀಕರಿಸಿ, ಅದೇ ದಿನ ಸಾಯಂಕಾಲ **5.00** ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರನ್ನು ತೆರೆಯಲಾಗುವುದು. ಟೆಂಡರಿನ ಜೊತೆ ಮುಂಗಡ ಠೇವಣಿ ಬಾಬ್ತು ರೂ. **5000.00** ಬ್ಯಾಂಕ್ ಡಿ.ಡಿ. ಅಥವಾ ಪೇ ಆರ್ಡರ್ ಲಗತ್ತಿಸಿರಬೇಕು. ತಪ್ಪಿತಸ್ಥ ಮತ್ತು ಕಪ್ಪು ಪಟ್ಟಿಯಲ್ಲಿರುವ ಗುತ್ತಿಗೆದಾರರು ಭಾಗವಹಿಸುವಂತಿಲ್ಲ.

| ಕ್ರ. ಸಂ. | ಪ್ರತಿ ಮಾಹೆಯಾನ ಸರಬರಾಜು ಮಾಡಬೇಕಾದ ಆಹಾರದ ಪ್ರಮಾಣ | |
|---|---|---|
| | ಆಹಾರ ಧಾನ್ಯಗಳ ವಿವರ | ಪ್ರಮಾಣ |
| 1 | ಬ್ರೆಡ್ [ಕೆ.ಜಿ.] | 60.00 |
| 2 | ಬಾಳೆಹಣ್ಣು [ಕೆ.ಜಿ.] | 9.00 |
| 3 | ಹಾಲು [ಲೀ.] | 52.50 |
| 4 | ಸೇಬು [ಕೆ.ಜಿ.] | 7.50 |
| 5 | ದ್ರಾಕ್ಷಿ [ಕೆ.ಜಿ.] | 7.50 |
| 6 | ಬೇಯಿಸಿದ ಆಲೂಗೆಡ್ಡೆ [ಕೆ.ಜಿ.] | 3.00 |
| 7 | ಕ್ಯಾರೆಟ್ [ಕೆ.ಜಿ.] | 5.40 |
| 8 | ಬೀನ್ಸ್ [ಕೆ.ಜಿ.] | 1.50 |
| 9 | ಮೂಳೆ ರಹಿತ ದನದ ಮಾಂಸ [ಕೆ.ಜಿ.] ವಾರಕ್ಕೆರಡು ಬಾರಿ | 0.80 |
| 10 | ಹಣ್ಣುಗಳು [ಕೆ.ಜಿ.]<br>[ಋತುಮಾನಕ್ಕನುಗುಣವಾಗಿ ದೊರೆಯುವ] | 6.00 |
| 11 | ಜೇನು ತುಪ್ಪ [ಗ್ರಾಂ.] ವಾರಕ್ಕೆರಡು ಬಾರಿ | 200.00 |
| 12 | ಹಸಿರು ಹುಲ್ಲು [ಕೆ.ಜಿ.] | 2640.00 |
| 13 | ಒಣಹುಲ್ಲು [ಕೆ.ಜಿ.] | 660.00 |
| 14 | ಲೂಸರ್ನ್ [ಕೆ.ಜಿ.] [ಕುದುರೆ ಮಸಾಲೆ ಹುಲ್ಲು] | 132.00 |
| 15 | ಶೇಂಗಾ ಹಿಂಡಿ [ಕೆ.ಜಿ.] | 132.00 |
| 16 | ಹುರಳಿ [ಕೆ.ಜಿ.] | 396.00 |
| 17 | ಗೋಧಿ ಬೂಸ [ಕೆ.ಜಿ.] | 528.00 |
| 18 | ಎಲೆಗಳುಳ್ಳ ಮರದ ರೆಂಬೆಗಳು [ಕೆ.ಜಿ.] ವಾರಕ್ಕೆ ಎರಡು ಬಾರಿ | 528.00 |
| 19 | ಉಪ್ಪು [ಗ್ರಾಂ] | 1.320 |
| 20 | ಬೇಯಿಸಿದ ಅಕ್ಕಿ ರಾಗಿ [ಕೆ.ಜಿ.] | 2.40 |
| 21 | ಮಿಶ್ರ ಕಾಳುಗಳು [ಕೆ.ಜಿ] | 7.50 |
| 22 | ಬೆಳ್ಳುಳ್ಳಿ [ಕೆ.ಜಿ] | 1.50 |
| 23 | ತರಕಾರಿ [ಕೆ.ಜಿ.] | 21.00 |
| 24 | ಈರುಳ್ಳಿ [ಕೆ.ಜಿ] | 3.75 |
| 25 | ಹೆಸರುಕಾಳು [ಕೆ.ಜಿ.] | 6.00 |

ಉಪ ಅರಣ್ಯ ಸಂರಕ್ಷಣಾಧಿಕಾರಿ,
ದಾವಣಗೆರೆ ವಿಭಾಗ, ದಾವಣಗೆರೆ

ಪಿ.ಆರ್. 379

**ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರವರ ಕಛೇರಿ, ಅಪರಾಧ ಮತ್ತು ತಾಂತ್ರಿಕ ಸೇವೆಗಳು, ಪೊಲೀಸ್ ಪ್ರಧಾನ ಕಛೇರಿ, ನಂ.2, ನೃಪತುಂಗ ರಸ್ತೆ, ಬೆಂಗಳೂರು – 560 001**

**ನೇಮಕಾತಿ ಆದೇಶ**

**ಸಂಖ್ಯೆ: ಸಿಬ್ಬಂದಿ/62/ಎಡಿಜಿಪಿ/ ಅ ಮತ್ತು ತಾಂಸೇ/09–10, ದಿನಾಂಕ: 21ನೇ ಮೇ 2010**

**ವಿಷಯ:** ಛಾಯಾ ಕೋಟೂರ್ D/o ವೀರಪ್ಪ ಕೋಟೂರ್ ಕೇರಾಫ್ ಎಸ್.ವಿ. ಕೋಟೂರ್, ಹೊಸ ಯಲ್ಲಾಪುರ ರಸ್ತೆ, ಲಕಮಾನಹಳ್ಳಿ ಓಣಿ, ಶುಕ್ರವಾರ ಪೇಟೆ, ಧಾರವಾಡ–580001, ರವರಿಗೆ ಶೀಘ್ರಲಿಪಿಗಾರರ ಹುದ್ದೆಗೆ ನೇಮಕ ಮಾಡುವ ಬಗ್ಗೆ

**ಉಲ್ಲೇಖ:** 1. ಪ್ರಧಾನ ಕಛೇರಿ ಆದೇಶ ಸಂಖ್ಯೆ: ಸಿಬ್ಬಂದಿ–2/27/2007–08, ದಿನಾಂಕ: 04.02.2010.

2. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ (ಎಸ್‌ಪಿಎಲ್)04/ಪಿಇಟಿ/2005, ಬೆಂಗಳೂರು, ದಿನಾಂಕ: 31.03.2006.

3. ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ, ಬೆಂಗಳೂರು ರವರ ಅಧಿಸೂಚನೆ ಸಂಖ್ಯೆ:ಆರ್(3)/225/2009–10, ದಿನಾಂಕ:06.01.2010.

ಛಾಯಾ ಕೋಟೂರ್ D/o ವೀರಪ್ಪ ಕೋಟೂರ್ ಕೇರಾಫ್ ಎಸ್.ವಿ.ಕೋಟೂರ್, ಹೊಸ ಯಲ್ಲಾಪುರ ರಸ್ತೆ, ಲಕಮಾನಹಳ್ಳಿ ಓಣಿ, ಶುಕ್ರವಾರ ಪೇಟೆ, ಧಾರವಾಡ–580001 ಇವರು ಕರ್ನಾಟಕ ಲೋಕಸೇವಾ ಆಯೋಗದ ಮೂಲಕ ಉಲ್ಲೇಖ (1) ರ ಪ್ರಧಾನ ಕಛೇರಿ ಆದೇಶದನ್ವಯ, ಶೀಘ್ರಲಿಪಿಗಾರರ ಹುದ್ದೆಗೆ ಉಪ ನಿರ್ದೇಶಕರು, ಪ್ರಾದೇಶಿಕ ನ್ಯಾಯ ವಿಜ್ಞಾನ ಪ್ರಯೋಗಾಲಯ ಬೆಳಗಾವಿ ರವರ ಕಛೇರಿಗೆ ಹಂಚಿಕೆಯಾಗಿರುವುದರಿಂದ, ಇವರನ್ನು ಸದರಿ ಕಛೇರಿಯಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರ ಹುದ್ದೆಗೆ ವೇತನ ಶ್ರೇಣಿ ರೂ.7275/– ರಿಂದ 13350/– ರಲ್ಲಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನೇಮಕಾತಿ ಮಾಡಿ ಅದೇಶ ಹೊರಡಿಸಲಾಗಿರುತ್ತದೆ.

1. ಅಭ್ಯರ್ಥಿಯು ಕೆ.ಸಿ.ಎಸ್. ಪ್ರೊಬೆಷನ್ ನಿಯಮಾನುಸಾರ ಎರಡು ವರ್ಷಗಳ ಖಾಯಂಪೂರ್ವ ಅವಧಿಯಲ್ಲಿರಬೇಕಾಗುತ್ತದೆ.
2. ಅಭ್ಯರ್ಥಿಯ ಪರಿವೀಕ್ಷಣಾ ಅವಧಿಯಲ್ಲಿ ವಾರ್ಷಿಕ ವೇತನ ಬಡ್ತಿ ಮತ್ತಿತರ ಸೌಲಭ್ಯಗಳು ಕರ್ನಾಟಕ ಸೇವಾ (ಪರೀಕ್ಷಕ) ನಿಯಮಗಳು 1977 ರ ನಿಯಮಗಳಿಗೆ ಒಳಪಟ್ಟಿರುತ್ತದೆ.
3. ಅಭ್ಯರ್ಥಿಯು ಪರಿವೀಕ್ಷಣಾ ಅವಧಿಯಲ್ಲಿ ನಿಗದಿಪಡಿಸಲಾದ ಇಲಾಖಾ ಪರೀಕ್ಷೆ ಹಾಗೂ ಕನ್ನಡ ಭಾಷಾ ಪರೀಕ್ಷೆಗಳನ್ನು ಕಡ್ಡಾಯವಾಗಿ ಉತ್ತೀರ್ಣ ಮಾಡಬೇಕಾಗಿರುತ್ತದೆ.
4. ಕರ್ನಾಟಕ ಸರ್ಕಾರಿ ಸೇವಾ ನಿಯಮಗಳು ಪರಿವೀಕ್ಷಣಾ ಅಭ್ಯರ್ಥಿಗೆ ಅನ್ವಯವಾಗುತ್ತದೆ.
5. ಕರ್ತವ್ಯಕ್ಕೆ ಹಾಜರಾದ ಕೂಡಲೇ ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯಲ್ಲಿ ವಿಮೆ ಪ್ರಾರಂಭಿಸಲು ವಿಮಾ ಕಂತು ರೂ.645/– ಗಳನ್ನು ಚಲನ್ ಮೂಲಕ ಸಂಬಂಧಿಸಿದ ಖಜಾನೆಗೆ ಪಾವತಿ ಮಾಡಿ, ರಸೀದಿಯನ್ನು ಕಛೇರಿಯ ಲೆಕ್ಕ ಶಾಖೆಗೆ ಹಾಜರುಪಡಿಸಬೇಕು.
6. ದೈಹಿಕ ದೃಡತೆ ಬಗ್ಗೆ ಜಿಲ್ಲಾ ವೈದ್ಯಾಧಿಕಾರಿಗಳಿಂದ ವೈದ್ಯಕೀಯ ಪ್ರಮಾಣ ಪತ್ರವನ್ನು ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವಾಗ ಸಲ್ಲಿಸಬೇಕು.
7. ನೌಕರಿಗೆ ಹಾಜರಾಗುವ ಸಮಯದಲ್ಲಿ ಯಾವುದೇ ಭತ್ಯೆಯನ್ನು ಪಡೆಯಲು ಅರ್ಹರಾಗಿರುವುದಿಲ್ಲ.
8. ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ ನಡತೆ ಪ್ರಮಾಣ ಪತ್ರವನ್ನು ಒದಗಿಸುವುದು.
9. ಅಭ್ಯರ್ಥಿಯು ಸರ್ಕಾರದ ಆದೇಶದಂತೆ ಹೊಸ ನಿವೃತ್ತಿ ಪಿಂಚಣಿ ಯೋಜನೆಗೆ ಒಳಪಟ್ಟಿದ್ದು, ಅಭ್ಯರ್ಥಿಯ ಮೂಲ ವೇತನ ಹಾಗೂ ತುಟ್ಟಿಭತ್ಯೆಯ ಶೇಕಡಾ 10 ರಷ್ಟು ಮೊತ್ತವನ್ನು ಪ್ರತಿ ತಿಂಗಳು ವಂತಿಗೆ ರೂಪದಲ್ಲಿ ಕಡಿತ ಮಾಡಲಾಗುವುದು.
10. ಅಭ್ಯರ್ಥಿಯು ನೇಮಕಾತಿ ಆದೇಶ ಸ್ವೀಕರಿಸಿದ 15 ದಿನಗಳೊಳಗಾಗಿ ಉಪ ನಿರ್ದೇಶಕರು, ಪ್ರಾದೇಶಿಕ ನ್ಯಾಯ ವಿಜ್ಞಾನ ಪ್ರಯೋಗಾಲಯ, ನಂ.85, ವಾತ್ಸಲ್ಯ ಬಿಲ್ಡಿಂಗ್, ಆಟೋನಗರ, ಕಣಬರಗಿ ರಸ್ತೆ, ಬೆಳಗಾವಿ ರವರ ಕಚೇರಿಯಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು. ತಪ್ಪಿದಲ್ಲಿ ನೇಮಕಾತಿ ಆದೇಶವನ್ನು ಯಾವುದೇ ಮುನ್ಸೂಚನೆ ಇಲ್ಲದೆ ರದ್ದುಪಡಿಸಲಾಗುವುದು.

ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು,
ಅಪರಾಧ ಮತ್ತು ತಾಂತ್ರಿಕ ಸೇವೆಗಳು, ಬೆಂಗಳೂರು

ಪಿ.ಆರ್. 374

**PUBLIC WORKS, PORTS & INLAND WATER TRANSPORT DEPARTMENT**

**Office of the Chief Engineer, Communication & Buildings (South), Bangalore**

**P.W.D. Building, K.R. Circle, Bengaluru**

**Short term Vth Call**

**INVITATION FOR QUOTATIONS FOR SUPPLY OF GOODS AND EQUIPMENT**

**No. CE/CBS/STR/TND-/Water Purifier/2010-11, Dated: 27th May 2010**

**Annexure-V**

**K/Q-2**

**Sub:** Invitation of Quotation for Supply of Water Purifier RO + UV with extra pre-filter Cylinder Systems.

**Ref:** 1. This Office letter No.CE.C&B/Store/WP/2009-10/dt:3.6.09.
2. This Office letter No.CE.C&B/Stores/WP/2009-10/dt:16.7.09, 12.8.09.
3. This office letter No.CE/CBS/STR/TND-2/Water Purifier/2009-10/dt:26.11.2009.

| Sl. No. | Brief Description of Goods | Brief Specification | Qnty. | Delivery Period | Place of delivery |
|---|---|---|---|---|---|
| 1 | RO + UV with extra pre-filter Cylinder System. | 8 Ltrs. Storage tanks 15 Ltrs. per hour out-put | 1 | One Week | Chief Engineer PW. P & I.W.T. C & B (South) Bangalore. |

Chief Engineer,
PW.P& I.W.T.Department, C & B (South), Bangalore.

| Sl. No. | Description of goods | Brief specification | Quantity | Unit | Unit Rate (Rs. in Figures) | Unit Rate (Rs. in Words) | Total amount (in Figures) |
|---|---|---|---|---|---|---|---|
| | | | | | | | |

1. We agree to supply the above goods in accordance with technical specifications for a total price shown against the item(s) for which quotations have been submitted within the period specified in the invitation for Quotations.
2. We also confirm that the normal commercial warranty/ guarantee of months shall apply to the offered goods.

Tenderer
Name:
Signature:
Date:

Chief Engineer,
PW.P& I.W.T.Department, C & B (South), Bangalore.

P.R. 376

**ಜಲ ಸಂಪನ್ಮೂಲ ಇಲಾಖೆ**

**ಕ್ರ.ಸಂ. ಕಾಪಾಇ/ಗುನಿವಿ/ಪಿಬಿ–2/ಟಿಬಿಪಿ–ಆಧುನೀಕರಣ/ಥರ್ಡ ಪಾರ್ಟಿ/ಟೆಂಡರ್/2010–11/111, ದಿನಾಂಕ: 20ನೇ ಮೇ 2010**

**ಪೂರ್ವಾರ್ಹತೆ (ಪ್ರಿ–ಕ್ವಾಲಿಫಿಕೇಷನ್) ಕಮ್ ಅಲ್ಪಾವಧಿ ಟೆಂಡರ್ ಅನ್ನು ರದ್ದುಪಡಿಸುವ ಕುರಿತು**

ಈ ಕಛೇರಿ ಟೆಂಡರ್ ಅಧಿಸೂಚನೆ ಸಂಖ್ಯೆ: ಕಾಪಾಇ/ಗುನಿವಿ/ಪಿಬಿ–2/ಟಿಬಿಪಿ–ಆಧುನೀಕರಣ/ಥರ್ಡಪಾರ್ಟಿ/ ಟೆಂಡರ್/2010–11/16 ದಿನಾಂಕ:09.04.2010 ರಂದು ಕರೆಯಲಾಗಿದ್ದ ಪೂರ್ವಾರ್ಹತೆ (ಪ್ರಿ–ಕ್ವಾಲಿಫಿಕೇಷನ್)–ಕಮ್–ಅಲ್ಪಾವಧಿ ಟೆಂಡರ್ ಅಧಿಸೂಚನೆಯನ್ನು ಅನಿವಾರ್ಯ ಕಾರಣಗಳಿಂದ ರದ್ದುಪಡಿಸಲಾಗಿದೆ.

ಕಾರ್ಯಪಾಲಕ ಅಭಿಯಂತರರು,

ಪಿ.ಆರ್. 377 ಗುಣ ನಿಯಂತ್ರಣ ವಿಭಾಗ, ಮುನಿರಾಬಾದ್

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ**

**ಕಿರು ಅರಣ್ಯ ಉತ್ಪನ್ನ ಟೆಂಡರ್ ಕಂ ಹರಾಜು ಮಾರಾಟ ಸಂಕ್ಷಿಪ್ತ ಪ್ರಕಟಣೆ**

**ಕ್ರ.ಸಂ. ಎ4–ಎಂಎಫ್‌ಪಿ–ಸಿಆರ್–22/2010–11, ದಿನಾಂಕ: 29ನೇ ಮೇ 2010**

ಈ ಮೂಲಕ ಸಾರ್ವಜನಿಕರ ಅವಗಾಹನೆಗೆ ತಿಳಿಯಪಡಿಸುವುದೇನೆಂದರೆ ದಿನಾಂಕ: 01.07.2010 ರಿಂದ 30.06.2012 ರವರೆಗೆ ಎರಡು ವರ್ಷಗಳ ಅವಧಿಗೆ ಶಿವಮೊಗ್ಗ ವಿಭಾಗದ ಈ ಕೆಳಕಂಡ ವಲಯಗಳಲ್ಲಿನ ಮೀಸಲು ಅರಣ್ಯಗಳು ಮತ್ತು ಸಣ್ಣ ಕಾಡುಗಳು, ಎಲ್ಲಾ ಸಣ್ಣ ಮತ್ತು ದೊಡ್ಡ ಕೆರೆ ದಂಡೆಗಳು, ಅರಣ್ಯ ಇಲಾಖೆಯ ಆಡಳಿತಕ್ಕೆ ಒಳಪಟ್ಟಿರುವ ಎಲ್ಲಾ ರಸ್ತೆ ಬದಿಯ ಮರಗಳು, ಕಾಯ್ದಿಟ್ಟ ಅರಣ್ಯ, ಸಣ್ಣ ಕಾಡುಗಳು, ಜಿಲ್ಲಾ ಕಾಡು (ಆಯಾ ವಲಯಗಳ ವ್ಯಾಪ್ತಿಗೆ ಒಳಪಟ್ಟಂತೆ ಮಾತ್ರ) ಮುಕ್ತ ಸರ್ಕಾರಿ ಜಮೀನು (ಮುಫತ್ ಮತ್ತು ಜಾಡಿ) ಕಾಡುಗಳಿಂದ ಈ ಕೆಳಗೆ ಸೂಚಿಸಿರುವ ತಪಶೀಲಿನಂತೆ ಗುತ್ತಿಗೆಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಶಿವಮೊಗ್ಗ ವಿಭಾಗ, ಶಿವಮೊಗ್ಗ ಅಥವಾ ಅವರಿಂದ ನಿಯೋಜಿತರಾದವರಿಂದ ಟೆಂಡರ್ ಕಂ ಹರಾಜು ಮೂಲಕ ವಿಕ್ರಯಿಸಲ್ಪಡುತ್ತದೆ. ಸದರಿ ಟೆಂಡರ್ ಕಂ ಹರಾಜಿನಲ್ಲಿ ಇಲಾಖೆಯಿಂದ ತಪ್ಪಿತಸ್ಥರಾದ ಗುತ್ತಿಗೆದಾರರು ಭಾಗವಹಿಸಲು ಅನರ್ಹರಿರುತ್ತಾರೆ.

ಟೆಂಡರ್ ಸ್ವೀಕರಿಸುವ ದಿನಾಂಕ: 30.06.2010 ಮಧ್ಯಾಹ್ನ 4.00 ಗಂಟೆವರೆಗೆ ಹಾಗೂ ಹರಾಜು ದಿನಾಂಕ: 30.06.2010 ಮಧ್ಯಾಹ್ನ 4.30 ಕ್ಕೆ ಅದೇ ದಿನ ಟೆಂಡರನ್ನು 04.45 ಕ್ಕೆ ತೆರೆಯಲಾಗುವುದು. ಒಂದು ವೇಳೆ ಮೇಲೆ ಹೇಳಿರುವ ದಿನಾಂಕದಂದು ಟೆಂಡರ್ ಹಾಕದಿದ್ದಲ್ಲಿ ಇದೇ ಟೆಂಡರ್ ಪ್ರಕ್ರಿಯೆಯನ್ನು ಮುಂದುವರೆಸಿ ಮರು ಟೆಂಡರ್‌ನ್ನು ದಿನಾಂಕ: 6.7.2010 ರಂದು ಟೆಂಡರ್ ಸ್ವೀಕರಿಸುವುದು ಹಾಗೂ ಹರಾಜು ದಿನಾಂಕ: 6.7.2010 ಮಧ್ಯಾಹ್ನ 4.30 ಕ್ಕೆ ಅದೇ ದಿನ ಟೆಂಡರನ್ನು 4.45ಕ್ಕೆ ತೆರೆಯಲಾಗುವುದು.

| ಕ್ರ. ಸಂ. | ಯೂನಿಟ್ ಸಂಖ್ಯೆ | ವಲಯದ ಹೆಸರು | ಅರಣ್ಯ ಉತ್ಪನ್ನದ ವಿವರ | ಇಎಂಡಿ ಮೊತ್ತ |
|---|---|---|---|---|
| 1 | I | ಆಗುಂಬೆ | ಮುರುಗನಹುಳಿ | 3000–00 |
| 2 | II | ಆಗುಂಬೆ | ಎಂ.ಎಫ್.ಪಿ 12 ಐಟಂ | 3000–00 |
| 3 | III | ಆಯನೂರು | ಎಂ.ಎಫ್.ಪಿ 12 ಐಟಂ | 3000–00 |
| 4 | IV | ರಿಪ್ಪನಪೇಟೆ | ಎಂ.ಎಫ್.ಪಿ 12 ಐಟಂ | 3000–00 |
| 5 | V | ತೀರ್ಥಹಳ್ಳಿ | ಎಂ.ಎಫ್.ಪಿ 12 ಐಟಂ | 3000–00 |
| 6 | VI | ತೀರ್ಥಹಳ್ಳಿ | ತುಪ್ರಾ ಎಲೆ | 3000–00 |
| 7 | VII | ತೀರ್ಥಹಳ್ಳಿ | ಮುರುಗನಹುಳಿ | 3000–00 |
| 8 | VIII | ಮಂಡಗದ್ದೆ | ವಾಟೇಹುಳಿ | 3000–00 |
| 9 | IX | ಮಂಡಗದ್ದೆ | ಮುರುಗನಹುಳಿ | 3000–00 |
| 10 | X | ರಿಪ್ಪನ್‌ಪೇಟೆ | ತುಪ್ರಾ ಎಲೆ | 3000–00 |
| 11 | XI | ಆಯನೂರು | ತುಪ್ರಾ ಎಲೆ | 3000–00 |
| 12 | XII | ತೀರ್ಥಹಳ್ಳಿ | ಹಾಲುಮಡ್ಡಿ | 5000–00 |
| 13 | XIII | ಆಗುಂಬೆ | ಹಾಲುಮಡ್ಡಿ | 5000–00 |
| 14 | XIV | ಮಂಡಗದ್ದೆ | ಹಾಲುಮಡ್ಡಿ | 5000–00 |
| 15 | XV | ರಿಪ್ಪನ್ ಪೇಟೆ (ಮಸರೂರು ಎಸ್.ಎಫ್) | ನೀಲಗಿರಿ ಸಿಟ್ರಿಡೋರಾ | 3000–00 |

| ಕ್ರ. ಸಂ. | ಯೂನಿಟ್ ಸಂಖ್ಯೆ | ವಲಯದ ಹೆಸರು | ಅರಣ್ಯ ಉತ್ಪನ್ನದ ವಿವರ | ಇಎಂಡಿ ಮೊತ್ತ |
|---|---|---|---|---|
| 16 | XVI | ರಿಪ್ಪನ್‌ಪೇಟೆ (ಬರುವ ಅರಸಾಳು ಎಸ್.ಎಫ್) | ನೀಲಗಿರಿ ಸಿಟ್ರಿಡೋರಾ | 3000–00 |
| 17 | XVII | ಆಯನೂರು | ನೀಲಗಿರಿ ಸಿಟ್ರಿಡೋರಾ | 3000–00 |
| 18 | XVIII | ಆಗುಂಬೆ | ಸಾಲುಧೂಪ | 3000–00 |
| 19 | XIX | ತೀರ್ಥಹಳ್ಳಿ | ಸಾಲುಧೂಪ | 3000–00 |
| 20 | XX | ಮಂಡಗದ್ದೆ | ಸಾಲುಧೂಪ | 3000–00 |

**ಎಂ.ಎಫ್.ಪಿ–12 ಐಟಂಗಳು:–** (1) ಜೇನುತುಪ್ಪ (2) ಮೇಣ (3) ಜೇನು ಮೇಣ (4) ತಾರೇಕಾಯಿ (5) ಕಾಡು ಕಾಳು ಮೆಣಸು (6) ಬೇವು ಬೀಜ (7) ಕರಿಬೇವು ಎಲೆ (8) ಹಿಪ್ಪೆ ಬೀಜ (9) ಹೊಂಗೆಬೀಜ (10) ಅಳಲೆ (11) ಅಮಟುವಾಳ (12) ಸೀಗೆಕಾಯಿ

**ಎಸ್. ವೆಂಕಟೇಸನ್**

ಪಿ.ಆರ್. 380 ಉಪ ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ

## ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿ, ಚಿಕ್ಕಮಗಳೂರು

### ಹರಾಜು ಪ್ರಕಟಣೆ

ಈ ಕೆಳಗೆ ನಮೂದಿಸಿರುವ ಈ ಜಿಲ್ಲೆಯ ವಿವಿಧ ನ್ಯಾಯಾಲಯಗಳಲ್ಲಿರುವ ಹಳೆಯ ಯಂತ್ರೋಪಕರಣಗಳನ್ನು ಎಲ್ಲಿದೆಯೋ ಅಲ್ಲಿ ಮತ್ತು ಹೇಗಿದೆಯೋ ಹಾಗೆ ಬಹಿರಂಗ ಹರಾಜು ಮಾಡಲಾಗುವುದು.

| ಕ್ರ. ಸಂ. | ಉಪಕರಣಗಳ ವಿವರ | ಉಪಕರಣಗಳ ಸಂಖ್ಯೆ | ಉಪಕರಣ ಇರುವ ನ್ಯಾಯಾಲಯದ ವಿಳಾಸ |
|---|---|---|---|
| 1 | ನಶುವಾ ಡೈನಾಮಿಕ್ ಜೆರಾಕ್ಸ್ ಯಂತ್ರ – 1987ನೇ ಮಾದರಿ | 1 | ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿಕ್ಕಮಗಳೂರು |
| 2 | ರೀಕೋ ಜೆರಾಕ್ಸ್ ಯಂತ್ರ – 1996ನೇ ಮಾದರಿ | 1 | ಹಿರಿಯ ಸಿವಿಲ್ ಜಡ್ಜ್ ಮತ್ತು ಸಿ.ಜೆ.ಎಂ. ನ್ಯಾಯಾಲಯ, ಚಿಕ್ಕಮಗಳೂರು |
| 3 | ರೀಕೋ ಜೆರಾಕ್ಸ್ ಯಂತ್ರ – 1996ನೇ ಮಾದರಿ | 1 | ಹಿರಿಯ ಸಿವಿಲ್ ಜಡ್ಜ್ ಮತ್ತು ಪ್ರಧಾನ ಜೆ.ಎಂ.ಎಫ್.ಸಿ. ನ್ಯಾಯಾಲಯ, ತರೀಕೆರೆ |
| 4 | ಕಿಲ್‌ಬರ್ನ್ ಜೆರಾಕ್ಸ್ ಯಂತ್ರ – 2001ನೇ ಮಾದರಿ | 1 | ಪ್ರಧಾನ ಸಿವಿಲ್ ಜಡ್ಜ್ ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಚಿಕ್ಕಮಗಳೂರು |
| 5 | ಕಿಲ್‌ಬರ್ನ್ ಜೆರಾಕ್ಸ್ ಯಂತ್ರ – 2001ನೇ ಮಾದರಿ | 1 | ಪ್ರಧಾನ ಸಿವಿಲ್ ಜಡ್ಜ್ ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮೂಡಿಗೆರೆ |
| 6 | ಕಿಲ್‌ಬರ್ನ್ ಜೆರಾಕ್ಸ್ ಯಂತ್ರ – 2002ನೇ ಮಾದರಿ | 1 | ಪ್ರಧಾನ ಸಿವಿಲ್ ಜಡ್ಜ್ ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಕಡೂರು |
| 7 | ಕಿಲ್‌ಬರ್ನ್ ಪೋಸ್ಟಲ್ ಫ್ರಾಂಕ್ಲಿಂಗ್ ಮೆಶಿನ್ – 1991ನೇ ಮಾದರಿ | 1 | ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿಕ್ಕಮಗಳೂರು |
| 8 | ಕಿಲ್‌ಬರ್ನ್ ಪೋಸ್ಟಲ್ ಫ್ರಾಂಕ್ಲಿಂಗ್ ಮೆಶಿನ್ – 1999ನೇ ಮಾದರಿ | 1 | ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿಕ್ಕಮಗಳೂರು |
| 9 | ಮೋದಿ ಫ್ಯಾಕ್ಸ್ ಮೆಶಿನ್ – 1998ನೇ ಮಾದರಿ | 1 | ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿಕ್ಕಮಗಳೂರು |

**ಷರತ್ತುಗಳು**

1. ಹರಾಜಿನಲ್ಲಿ ಭಾಗವಹಿಸಲಿಚ್ಛಿಸುವವರು ಪ್ರತಿಯೊಂದು ಉಪಕರಣಕ್ಕೆ ಪ್ರತ್ಯೇಕವಾಗಿ ತಾವು ಬಿಡ್ ಮಾಡುವ ಮೊಬಲಗಿಗೆ ಕೊಟೇಷನ್ ಅನ್ನು ಮುಚ್ಚಿದ ಲಕೋಟೆಯಲ್ಲಿ ಕ್ರಮ ಸಂಖ್ಯೆಯನ್ನು ನಮೂದಿಸಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿಗೆ ದಿನಾಂಕ: 28.06.2010 ರಂದು 12.00 ಗಂಟೆಯೊಳಗೆ ತಲುಪುವಂತೆ ಸಲ್ಲಿಸಬೇಕು. ಅಲ್ಲದೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ವಿಳಾಸ ನಮೂದಿಸಿದ ಲಕೋಟೆಯನ್ನು ಉಪಕರಣ ಇರುವ ನ್ಯಾಯಾಲಯಕ್ಕೂ ಮೇಲಿನ ತಾರೀಖಿನೊಳಗೆ ಸಲ್ಲಿಸಬಹುದು. ಬಿಡ್‌ದಾರರು ಕೊಟೇಷನ್ ಸಲ್ಲಿಸುವಾಗ ಆಯಾ ಉಪಕರಣಗಳಿರುವ ನ್ಯಾಯಾಲಯದಲ್ಲಾಗಲಿ ಅಥವಾ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿಯಲ್ಲಾಗಲಿ ಹಿಂತಿರುಗಿಸಲಾಗುವ ಭದ್ರತಾ ಠೇವಣಿ ರೂ. 200–00 ಅನ್ನು ಪಾವತಿಸಬೇಕು.

2. ಹರಾಜನ್ನು ದಿನಾಂಕ: 05.07.2010 ರಂದು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿಯಲ್ಲಿ ಮಧ್ಯಾಹ್ನ 02.30 ಗಂಟೆಗೆ ಸರಿಯಾಗಿ ಮಾಡಲಾಗುತ್ತದೆ. ಎಲ್ಲಾ ಬಿಡ್‌ದಾರರು ಈ ಹರಾಜಿನಲ್ಲಿ ಭಾಗವಹಿಸಬಹುದು.

3. ಹರಾಜಿನಲ್ಲಿ ಭಾಗವಹಿಸುವವರು ಉಪಕರಣಗಳನ್ನು ಆಯಾ ನ್ಯಾಯಾಲಯದ ಕಛೇರಿಯ ವೇಳೆಯಲ್ಲಿ ಪರಿಶೀಲಿಸಬಹುದು.

4. ಅತಿ ಹೆಚ್ಚಿನ ದರ ನಮೂದಿಸಿದ ಅಥವಾ ಹರಾಜಿನಲ್ಲಿ ಬಿಡ್ ಮಾಡಿದ ವ್ಯಕ್ತಿಗಳಿಗೆ ಉಪಕರಣವನ್ನು ಹಸ್ತಾಂತರಿಸಲಾಗುವುದು. ಹರಾಜಿನ ಮೊಬಲಗನ್ನು ಸ್ಥಳದಲ್ಲಿಯೇ ಏಕಗಂಟಿನಲ್ಲಿ ಪಾವತಿ ಮಾಡಬೇಕು.

5. ಒಂದು ವೇಳೆ ಅತಿ ಹೆಚ್ಚಿನ ಬಿಡ್‌ದಾರರು ಹಣ ಪಾವತಿ ಮಾಡಲು ತಪ್ಪಿದಲ್ಲಿ ಅಂತಹಾ ಬಿಡ್‌ದಾರರ ಬಿಡ್ ಅನ್ನು ಅಸಿಂಧುಗೊಳಿಸಿ ಅಂಥಹವರ ಭದ್ರತಾ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಂಡು ನಂತರದ ಹೆಚ್ಚಿನ ಬಿಡ್‌ದಾರರಿಗೆ ಉಪಕರಣವನ್ನು ನೀಡಲಾಗುವುದು. ಈ ರೀತಿಯಾದಲ್ಲಿ ವ್ಯತ್ಯಾಸದ ಬಿಡ್ ಹಣವನ್ನು ಸರಕಾರಕ್ಕೆ ಉಂಟಾದ ಲುಕ್ಸಾನು ಎಂದು ಪರಿಗಣಿಸಿ ಹಣ ಪಾವತಿಸಲು ವಿಫಲರಾದ ಬಿಡ್‌ದಾರರಿಂದ ವಸೂಲಿ ಮಾಡಲಾಗುತ್ತದೆ.

6. ಹರಾಜಿನ ದಿನಾಂಕವನ್ನು ಯಾವುದೇ ಕಾರಣ ನೀಡದೆ ಮುಂದೂಡುವುದು ಮತ್ತು ಯಾವುದೇ ಬಿಡ್‌ದಾರರ ಬಿಡ್ ಅನ್ನು ಅಂಗೀಕರಿಸುವುದು ಅಥವಾ ಕಾರಣ ನೀಡದೆ ತಿರಸ್ಕರಿಸುವ ಅಧಿಕಾರ ಈ ಕೆಳಗೆ ಸಹಿ ಮಾಡಿರುವವರಿಗೆ ಇರುತ್ತದೆ.

**ರತ್ನಕಲಾ**

ಪಿ.ಆರ್. 382 ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿಕ್ಕಮಗಳೂರು

## ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಕಾರ್ಯನಿರ್ವಾಹಕ ಇಂಜಿನಿಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ

## ಅಲ್ಪಾವಧಿ ಟೆಂಡರ್ ಪ್ರಕಟಣೆ (3ನೇ ಕರೆ)

**No.EE/MID/BGM/AE/TND/2009-10/1847, Dated: 3rd June 2010**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯ್ದೆ ಅಧಿನಿಯಮ–2000ರ ಮತ್ತು ಇತ್ತೀಚಿನ ತಿದ್ದುಪಡಿಗಳಂತೆ, ಈ ಕೆಳಗಿನ ಕಾಮಗಾರಿಗಾಗಿ ಅರ್ಹ ಗುತ್ತಿಗೆದಾರರಿಂದ ಐಟಂ ದರದಂತೆ ಗುತ್ತಿಗೆಯನ್ನು "ಇ ಪ್ರೊಕ್ಯೂರ್‌ಮೆಂಟ್" ಮುಖಾಂತರ ಕಾರ್ಯನಿರ್ವಾಹಕ ಇಂಜಿನೀಯರರು ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರಿಂದ ಆಹ್ವಾನಿಸಲಾಗಿದೆ.

| ಕ್ರ. ಸಂ. | ಕೆಲಸದ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇ.ಎಂ.ಡಿ ಮೊತ್ತ (ರೂ.ಗಳಲ್ಲಿ) | ಟೆಂಡರ್ ಶುಲ್ಕ (ರೂ.ಗಳಲ್ಲಿ) | ಕೆಲಸವನ್ನು ಮುಗಿಸುವ ಕಾಲಮಿತಿ ಮಳೆಗಾಲ ಸೇರಿ |
|---|---|---|---|---|---|
| | **Standard Tender Document KW-4ರಂತೆ** | | | | |
| 1. | ಬೆಳಗಾವಿ ಜಿಲ್ಲೆ ಚಿಕ್ಕೋಡಿ ತಾಲ್ಲೂಕಿನ ಬೋರಗಾಂವ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ | 435.27 | 653000/– | 5000/– | 18 ತಿಂಗಳು (ಮಳೆಗಾಲ ಸೇರಿ) |

ಗುತ್ತಿಗೆದಾರರು ಕರ್ನಾಟಕ ಸರ್ಕಾರದ "ಇ ಪ್ರೊಕ್ಯೂರ್‌ಮೆಂಟ್" ವೆಬ್‌ಸೈಟ್ https://eproc.karnataka.gov.in ನಲ್ಲಿ ಲಾಗಿನ್ ಆಗಿ ದಿನಾಂಕ: 14/06/2010 ರಿಂದ Download ಮಾಡಿಕೊಳ್ಳಬಹುದು.

ಕಾಮಗಾರಿ ಪಡೆಯಲು ಅರ್ಹತೆ ಷರತ್ತುಗಳು ಕಾಮಗಾರಿ ವಿವರ ಇತ್ಯಾದಿಗಳನ್ನು ದಿ:28/6/2010ರ 17–30 ಗಂಟೆವರೆಗೆ ವಿಭಾಗ ಕಛೇರಿಯಲ್ಲಿ ಅಥವಾ "ಇ–ಪ್ರೊಕ್ಯೂರ್‌ಮೆಂಟ್" ಹೆಲ್ಪ್ ಡೆಸ್ಕನಿಂದ ಪಡೆಯಬಹುದು. 080–22485867.

ಪೂರ್ವ ಟೆಂಡರ್ ಸಭೆಯ ದಿನಾಂಕ: 30.06.2010 (ಕಾರ್ಯನಿರ್ವಾಹಕ ಇಂಜಿನೀಯರರು ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರ ಕಛೇರಿಯಲ್ಲಿ ಮುಂ 11.00 ಗಂಟೆ)

ಟೆಂಡರ್‌ಗಳನ್ನು ಇ.ಎಂ.ಡಿ. ಹಾಗೂ ಟೆಂಡರ್ ಶುಲ್ಕದೊಂದಿಗೆ (ವೆಬ್‌ಸೈಟ್‌ನಲ್ಲಿ ನಿಗದಿ ಮಾಡಿರುವ ಯಾವುದಾದರೂ ಒಂದು ಮಾದರಿಯಲ್ಲಿ ಆನ್ ಲೈನ್ ಪೇಮೆಂಟ್ ಮಾತ್ರ) 'ಇ–ಪ್ರೊಕ್ಯೂರ್‌ಮೆಂಟ್' ವೆಬ್‌ಸೈಟ್ https://eproc.karnataka.gov.in ನಲ್ಲಿ ದಿನಾಂಕ 03/07/2010ರ 16–00 ಗಂಟೆವರೆಗೆ ಸ್ವೀಕರಿಸಲಾಗುವುದು.

**ವ್ಹಿ.ಬಿ. ಕುಲಕರ್ಣಿ**

ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ

**WATER RESOURCES DEPARTMENT (MINOR IRRIGATION)**

**Office of the Executive Engineer M.I. Division, Belgaum**

**SHORT-TERM TENDER NOTIFICATION (III-Call)**

**No.EE/MID/BGM/TND/AE/09-10/1847, Dated: 3rd June 2010**

As per KTTP Act-2000 and Amendment the Executive Engineer M.I. Division Belgaum has invited the item rate for the following work in E-Procurement Portal System.

| Sl. No. | Name of Work | Amount put to tender (Rs. in lakhs) | Earnest Money Deposit (Rs.) | Tender Processing Fee (Rs.) | Period ofcompletion (including monsoon) |
|---|---|---|---|---|---|
| | **(Standard Tender Document KW-4)** | | | | |
| 1 | Construction of LIS near Boragaon Village in Chikkodi Tq. Belgaum Dist | 435.27 | 653000/- | 5000.00 | 18 months (including monsoon) |

The Contractors may log-in and Download from Govt. of Karnataka E-Procurement Web Site https://eproc.karnataka.gov.in from 14/06/2010.

The details of the works and other conditions may be obtained in the Division Office or E-Procurement Help Desk 080-22485867 up to 28/06/2010.

Date of Pre-tender meeting : 30.06.2010 (In the office of the Executive Engineer, M.I. Division, Belgaum at 11.00 AM

The Tender will be received along with Tender processing fee and E.M.D. (as prescribed in the Web-site in any one of the mode by on-line payment only) in https://eproc.karnataka.gov.in on or before 3/07/2010 upto 16.00 hrs.

**V.B. KULKARNI**

P.R. 394 Executive Engineer, M.I. Division, Belgaum

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಅಲ್ಪಾವಧಿ ಇ–ಟೆಂಡರ್ ಪ್ರಕಟಣೆ**

**ಸಂ:ಕಾಇಂ:ಲೋಇ:ಚಿವಿ:ರಸ್ತೆ:ಟೆಂಡರ್–02:2010–11, ದಿನಾಂಕ: 29ನೇ ಮೇ 2010**

1) ಇ–ಟೆಂಡರ್ ಉಲ್ಲೇಖ: KPWD/2010-11/RD/WORK_INDENT 2720

ಕರ್ನಾಟಕ ರಾಜ್ಯಪಾಲರ ಪರವಾಗಿ, 1ನೇ ದರ್ಜೆ ಗುತ್ತಿಗೆದಾರರಿಗೆ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಮುಖಾಂತರ ಟೆಂಡರ್ ಅನ್ನು ದ್ವಿಲಕೋಟೆ ಪದ್ಧತಿಯಲ್ಲಿ ಆಹ್ವಾನಿಸಲಾಗಿದೆ. ಕಾಮಗಾರಿ ವಿವರಗಳು ಈ ಕೆಳಗಿನಂತಿವೆ.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗೆ ಇಟ್ಟಿರುವ ಹಣ ರೂ. ಗಳಲ್ಲಿ | ಮುಂಗಡ ಠೇವಣಿ ಹಣ ರೂ.ಗಳಲ್ಲಿ |
|---|---|---|---|
| 1 | ಚಳ್ಳಕೆರೆ ತಾಲ್ಲೂಕು ಚಳ್ಳಕೆರೆ–ಮೈಲನಹಳ್ಳಿ–ಓಬಳಾಪುರ ರಸ್ತೆ (ದೊಡ್ಡ ಉಳ್ಳಾರ್ತಿಕಾವಲು ಬಳಿ ರಸ್ತೆ ಅಲೈನಮೆಂಟ್ ಸ್ಥಳಾಂತರ) ಕಿ.ಮೀ. 7.00 ರಿಂದ ಕಿ.ಮೀ. 13.075 ರವರೆಗೆ ರಸ್ತೆ ಅಭಿವೃದ್ಧಿ ಮತ್ತು ಡಾಂಬರೀಕರಣ ಕಾಮಗಾರಿ | 115922877–88 | 1500000–00 |

ಅರ್ಹ ಗುತ್ತಿಗೆದಾರರು ವೆಬ್ ಸೈಟ್ www.eproc.Karnataka.gov.in/eportal/index.seam ನಲ್ಲಿ ಟೆಂಡರ್‌ಗಾಗಿ ಭಾಗವಹಿಸಬಹುದು ಹಾಗೂ ವಿವರಗಳನ್ನು ಪಡೆಯಬಹುದಾಗಿದೆ.

| | | |
|---|---|---|
| ಟೆಂಡರ್ ಬಗ್ಗೆ ವಿಚಾರಿಸಲು/ಮಾಹಿತಿ ಪಡೆಯಲು ಕೊನೆಯ ದಿನಾಂಕ | : | 01.07.2010 ಸಮಯ: 17.30 |
| ಟೆಂಡರ್ ಸಲ್ಲಿಸುವ ಅಂತಿಮ ದಿನಾಂಕ ಮತ್ತು ವೇಳೆ | : | 06.07.2010 ಸಮಯ: 16.00 |
| ತಾಂತ್ರಿಕ ಬಿಡ್‌ನ್ನು ತೆರೆಯುವ ದಿನಾಂಕ ಮತ್ತು ವೇಳೆ | : | 12.07.2010 ಸಮಯ: 11.00 |
| ಆರ್ಥಿಕ ಬಿಡ್‌ನ್ನು ತೆರೆಯುವ ದಿನಾಂಕ ಮತ್ತು ವೇಳೆ | : | 16.07.2010 ಸಮಯ: 11.00 |

**ಸೂಚನೆ:** ಈ ಮೇಲ್ಕಂಡ ಕಾಮಗಾರಿಗಳ ಮುಂದೆ ನಮೂದಿಸಿದ ಟೆಂಡರಿಗಿಟ್ಟ ಮೊತ್ತ ಮತ್ತು ಮುಂಗಡ ಹಣ ಠೇವಣಿ (ಇ.ಎಂ.ಡಿ) ಯಲ್ಲಿ ಯಾವುದೇ ಬದಲಾವಣೆ ಇದ್ದಲ್ಲಿ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಬಿಡ್ ಡಾಕ್ಯುಮೆಂಟ್‌ನಲ್ಲಿನಮೂದಿಸಿರುವ ಟೆಂಡರಿಗಿಟ್ಟ ಮೊತ್ತ ಮತ್ತು ಮುಂಗಡ ಹಣ ಠೇವಣಿ (ಇ.ಎಂ.ಡಿ) ಮೊತ್ತವು ಅಂತಿಮವಾಗಿರುತ್ತದೆ.

ಹೆಚ್ಚಿನ ವಿವರಗಳಿಗೆ ಸದರಿ ಕಛೇರಿಯಿಂದ ಹಾಗೂ ಹೆಚ್.ಪಿ. ಕಂಪನಿಯ ಸಹಾಯಕ ದೂರವಾಣಿ ಸಂಖ್ಯೆ: 08022485867 ರಿಂದ ಮಾಹಿತಿ ಪಡೆಯಬಹುದು.

ಕಾರ್ಯಪಾಲಕ ಅಭಿಯಂತರರು
ಲೋಕೋಪಯೋಗಿ ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ, ವಿಭಾಗ, ಚಿತ್ರದುರ್ಗ

ಪಿ.ಆರ್. 384

## ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ

**ಕಾರ್ಯನಿರ್ವಾಹಕ ಇಂಜಿನಿಯರಿಂಗ್‌ರವರ ಕಛೇರಿ, ಪಂ.ರಾ.ಇಂ. ವಿಭಾಗ, ತುಮಕೂರು**

**ಅಲ್ಪಾವಧಿ ಇ–ಪ್ರೊಕ್ಯೂರ್‌ಮೆಂಟ್ ಪ್ರಕಟಣೆ–01/2010–11**

**ಸಂಖ್ಯೆ: ಕಾಇಂ/ಪಂರಾಇಂವಿ/ತುಮ/ಜೆಇ–7/ಟೆಂಡರ್/2010–11, ದಿನಾಂಕ: 18ನೇ ಮೇ 2010**

ಕರ್ನಾಟಕ ರಾಜ್ಯದ ರಾಜ್ಯಪಾಲರ ಪರವಾಗಿ ಐಟಂವಾರು ಟೆಂಡರ್‌ಗಳನ್ನು K/W-4 (ಸ್ಟ್ಯಾಂಡರ್ಡ್ ಟೆಂಡರ್ ಡಾಕ್ಯುಮೆಂಟ್) ನಿಯಮಾನುಸಾರ ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳು G.O. No. FD 9 PCL 2004 Dt.06.08.2005 ಹಾಗೂ ಇತ್ತೀಚಿನ ತಿದ್ದುಪಡಿ ನಿಬಂಧನೆಗೊಳಪಟ್ಟಂತೆ ಪಂಚಾಯತ್‌ರಾಜ್ ಇಂಜಿನಿಯರಿಂಗ್ ಇಲಾಖೆಯಲ್ಲಿ ಹಾಗೂ ಕಿಯೋನಿಕ್ಸ್, ನಂ. 24, ಸುಧಾ ಕಾಂಪ್ಲೆಕ್ಸ್, 3ನೇ ಹಂತ, 4ನೇ ಬ್ಲಾಕ್, ಪವಿತ್ರ ಪ್ಯಾರಡೈಸ್ ಹತ್ತಿರ, ಬಸವೇಶ್ವರ ನಗರ, ಬೆಂಗಳೂರು–79 ರಲ್ಲಿ ನೊಂದಾಯಿಸಿದ ಅರ್ಹ (ಸಿವಿಲ್) ಗುತ್ತಿಗೆದಾರರುಗಳಿಂದ ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ತುಮಕೂರು ವ್ಯಾಪ್ತಿಯ ಈ ಕೆಳಗೆ ನಮೂದಿಸಿರುವ 2009–10ನೇ ಸಾಲಿನ ನಬಾರ್ಡ್ ಆರ್.ಐ.ಡಿ.ಎಫ್.– XV ರಸ್ತೆ ಮತ್ತು ಸೇತುವೆ ಯೋಜನೆ ಕಾಮಗಾರಿಗಳಿಗೆ ಟೆಂಡರ್‌ಗಳನ್ನು ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಮಾತ್ರ ದ್ವಿ ಲಕೋಟೆ ಪದ್ಧತಿಯಲ್ಲಿ ಆಹ್ವಾನಿಸಲಾಗಿದೆ. ದ್ವಿ ಲಕೋಟೆಗಳಲ್ಲಿ ಒಂದು ತಾಂತ್ರಿಕ ಬಿಡ್, ಎರಡನೆಯದು ಆರ್ಥಿಕ ಬಿಡ್ ಆಗಿರುತ್ತದೆ. ತಾಂತ್ರಿಕ ಬಿಡ್ಡನ್ನು ಪ್ರಥಮ ಹಂತದಲ್ಲಿ ತೆರೆಯಲಾಗುವುದು. ತದ ನಂತರ ತಾಂತ್ರಿಕ ಬಿಡ್‌ನಲ್ಲಿ ಅರ್ಹತೆ ಪಡೆದ ಗುತ್ತಿಗೆದಾರರ ಆರ್ಥಿಕ ಬಿಡ್ಡನ್ನು ಮಾತ್ರ ತೆರೆದು ವಿಶ್ಲೇಷಿಸಲಾಗುವುದು.

| | | | |
|---|---|---|---|
| 1. | ಖಾಲಿ ಇ–ಪ್ರೊಕ್ಯೂರ್‌ಮೆಂಟ್ ನಮೂನೆಗಳಿಗಾಗಿ ಆನ್‌ಲೈನ್ ನಲ್ಲಿ ಇ–ಪೇಮೆಂಟ್/ ಎನ್.ಇ.ಎಫ್.ಟಿ. ಮೂಲಕ ಅರ್ಜಿ ಸಲ್ಲಿಸಲು ಹಾಗೂ ಖಾಲಿ ಇ–ಪ್ರೊಕ್ಯೂರ್ ಮೆಂಟ್ ನಮೂನೆಗಳನ್ನು ಆನ್ ಲೈನ್ ಮೂಲಕ ಪಡೆಯುವ ದಿನಾಂಕ | : | 21.6.2010 ರಿಂದ 24.6.2010 ಸಂಜೆ 5.00 ಗಂಟೆವರೆಗೆ |
| 2. | ಭರ್ತಿ ಮಾಡಿದ ಇ–ಪ್ರೊಕ್ಯೂರ್‌ಮೆಂಟ್ ಗಳನ್ನು ಹಾಗೂ ಇ.ಎಂ.ಡಿ. ಠೇವಣಿಯನ್ನು ಆನ್‌ಲೈನ್ ಮೂಲಕ ಸ್ವೀಕರಿಸುವ ಕೊನೆಯ ದಿನಾಂಕ | : | 24.6.2010 ಸಂಜೆ 5.30 ಗಂಟೆವರೆಗೆ |
| 3. | ತಾಂತ್ರಿಕ ಬಿಡ್ ಲಕೋಟೆಯನ್ನು ತೆರೆಯುವ ದಿನಾಂಕ (ಆನ್‌ಲೈನ್ ಮೂಲಕ) | : | 25.6.2010 ಪೂರ್ವಹ್ನ 11.00 ಗಂಟೆ ನಂತರ |
| 4. | ಅರ್ಹ ಗುತ್ತಿಗೆದಾರರ ಆರ್ಥಿಕ ಲಕೋಟೆಯನ್ನು ತೆರೆಯುವ ದಿನಾಂಕ (ಆನ್‌ಲೈನ್ ಮೂಲಕ) | : | 30.6.2010 ಪೂರ್ವಾಹ್ನ 11.00 ಗಂಟೆ ನಂತರ |

1. ಕಾಮಗಾರಿಯ ಹೆಸರು: ತುಮಕೂರು ತಾಲ್ಲೂಕು ನಬಾರ್ಡ್ ಆರ್.ಐ.ಡಿ.ಎಫ್–15 ಯೋಜನೆಯ 3 ರಸ್ತೆ ಅಭಿವೃದ್ಧಿ ಕಾಮಗಾರಿಗಳ ಅಂದಾಜು ಮೊತ್ತ ರೂ.127.00 ಲಕ್ಷಗಳು. ಟೆಂಡರ್ ಮೊತ್ತ ರೂ.115.87 ಲಕ್ಷಗಳು, ಇ.ಎಂ.ಡಿ. ಮೊತ್ತ ರೂ.2.00 ಲಕ್ಷಗಳು. ಟೆಂಡರ್ ದಾಖಲಾತಿ ಬೆಲೆ ರೂ.0.635 ಲಕ್ಷಗಳು. ಅರ್ಹ ದರ್ಜೆ ಗುತ್ತಿಗೆದಾರರು – 1ನೇ ದರ್ಜೆ ಗುತ್ತಿಗೆದಾರರು. ಕಾಮಗಾರಿ ಪೂರ್ಣಗೊಳಿಸಲು ನಿಗದಿಯಾಗಿರುವ ಸಮಯ – 6 ತಿಂಗಳು (ಮಳೆಗಾಲ ಸೇರಿದಂತೆ)

ಕಾರ್ಯಪಾಲಕ ಇಂಜಿನಿಯರ್,
ಪಂ.ರಾ.ಇಂ. ವಿಭಾಗ, ತುಮಕೂರು

ಪಿ.ಆರ್. 387

## ಚಿತ್ರದುರ್ಗ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಚೇರಿ

**ಅಧಿಸೂಚನೆ ಸಂಖ್ಯೆ: 02 ದಿನಾಂಕ: 25ನೇ ಮೇ 2010**

**ವಿಷಯ:** ಚಿತ್ರದುರ್ಗ ನ್ಯಾಯಾಂಗ ಘಟಕದಲ್ಲಿ ಖಾಲಿ ಇರುವ ಬೆರಳಚ್ಚುಗಾರರು, ಬೆರಳಚ್ಚು-ನಕಲುಗಾರರು, ಪ್ರೋಸಸ್‌ಸರ್ವರ್ ಹಾಗೂ ಜವಾನರ ಹುದ್ದೆಗಳ ನೇಮಕಾತಿ ಬಗ್ಗೆ.

**ಉಲ್ಲೇಖ:** 1. ಗೌರವಾನ್ವಿತ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: ಎಲ್‌ಸಿಎ–II–164/09, ದಿನಾಂಕ: 18.3.2010.

2. ಸರ್ಕಾರಿ ಆದೇಶ ಸಂಖ್ಯೆ: ಎಲ್‌ಎಡಬ್ಲ್ಯು 155 ಎಲ್‌ಎಸಿ 209, ದಿನಾಂಕ: 3.2.2010.
3. ಗೌರವಾನ್ವಿತ ಉಚ್ಚ ನ್ಯಾಯಾಲಯದ ಅಧಿಸೂಚನೆ ಸಂಖ್ಯೆ: ಎಲ್‌ಸಿಎ–I–220/96, ದಿನಾಂಕ: 8.3.2010.
4. ಸರ್ಕಾರಿ ಆದೇಶ ಸಂಖ್ಯೆ: ಲಾ, 137 ಎಲ್‌ಎಸಿ 2005 ದಿ: 25.3.2008.
5. ಸರ್ಕಾರದ ಅಧಿಸೂಚನೆ ಸಂಖ್ಯೆ: ಲಾ. 144 ಎಲ್‌ಎಸಿ 2009 ದಿನಾಂಕ: 6.8.2009 ಹಾಗೂ ಲಾ. 144 ಎಲ್‌ಎಸಿ 2009 ದಿನಾಂಕ: 2.11.2009.
6. ಈ ಕಚೇರಿ ಟಿಪ್ಪಣಿ ಹಾಗೂ ದಿನಾಂಕ 29.4.2010 ರ ಟಿಪ್ಪಣಿ ಮೇಲಿನ ಆದೇಶ.

**ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ 31.7.2010 ಸಂಜೆ 5.00 ಗಂಟೆ**

ಅರ್ಜಿ ಸಲ್ಲಿಸಬೇಕಾದ ವಿಳಾಸ: ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಜಿಲ್ಲಾ ನ್ಯಾಯಾಲಯ, ಚಿತ್ರದುರ್ಗ, ಚಿತ್ರದುರ್ಗ ಜಿಲ್ಲೆ

I. ಖಾಲಿ ಹುದ್ದೆಗಳ ಸಂಖ್ಯೆ (Provisionaly) ಹಾಗೂ ವರ್ಗೀಕರಣ:

**1. ಬೆರಳಚ್ಚುಗಾರರ ಹುದ್ದೆಗಳ ಸಂಖ್ಯೆ: 10**

ಅ) ವೇತನ ಶ್ರೇಣಿ : ರೂ.5800–100–6000–125–6500–150–7100–175–7800–200–8600–225–9500–250–10500 ಹಾಗೂ 90 ರೂ. ವಿಶೇಷ ವೇತನ ನೀಡಲಾಗುವುದು.

| | ವರ್ಗೀಕರಣ | ಸಾಮಾನ್ಯ ಅಭ್ಯರ್ಥಿ | ಪರಿಶಿಷ್ಟ ಜಾತಿ | ಪ್ರವರ್ಗ–2 ಎ | ಪ್ರವರ್ಗ2 ಬಿ | ಪರಿಶಿಷ್ಟ ಪಂಗಡ | ಒಟ್ಟು |
|---|---|---|---|---|---|---|---|
| ಬೆರಳಚ್ಚುಗಾರರು | ಗ್ರಾಮೀಣ | 01 | 01 | 01 | | | 03 |
| | ಮಹಿಳೆ | 01 | | | 01 | 01 | 03 |
| | ಯೋಜನಾ ನಿರಾಶ್ರಿತರು | 01 | | | | | 01 |
| | ಇತರೆ | 01 | 01 | | | | 02 |
| | ಮಾಜಿ ಸೈನಿಕರು | 01 | | | | | 01 |
| | | **05** | **02** | **01** | **01** | **01** | **10** |

**II. ಶೈಕ್ಷಣಿಕ ವಿದ್ಯಾರ್ಹತೆ:**

1) ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ

2) ಸಾರ್ವಜನಿಕ ಶಿಕ್ಷಣ ಇಲಾಖೆ ವತಿಯಿಂದ ನಡೆಸುವ ಕನ್ನಡ ಹಾಗೂ ಆಂಗ್ಲ ಬೆರಳಚ್ಚು ಪ್ರೌಢ ದರ್ಜೆ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು ಅಥವಾ ಕರ್ನಾಟಕ ತಾಂತ್ರಿಕ ಪರೀಕ್ಷಾ ಮಂಡಳಿಯು ನಡೆಸುವ ಸೆಕ್ರೆಟರಿಯಲ್ ಪ್ರಾಕ್ಟೀಸ್ ಪಠ್ಯಕ್ರಮದ ಡಿಪ್ಲೋಮಾ ಪದವಿಯೊಂದಿಗೆ ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ವಿಷಯಗಳನ್ನು ಐಚ್ಛಿಕ ವಿಷಯವಾಗಿ ಅಭ್ಯಸಿಸಿರಬೇಕು.

**III. ಅರ್ಹತಾ ಪರೀಕ್ಷೆ:**

1) ಅಭ್ಯರ್ಥಿಯು ನೇಮಕಾತಿ ಆಯ್ಕೆ ವಿಧಾನ ಪ್ರಾಧಿಕಾರದಿಂದ ನಾಮನಿರ್ದೇಶಿಸಲ್ಪಟ್ಟ ಅಧಿಕಾರಿಯವರಿಂದ ಸುಮಾರು 15 ನಿಮಿಷಗಳ ಕಾಲ ಬೆರಳಚ್ಚು ಮಾಡಲು ನೀಡುವ ಉಕ್ತಲೇಖನವನ್ನು ನೀಡಲಾಗುವುದು. ಈ ಪರೀಕ್ಷೆಯು ಗರಿಷ್ಠ 100 ಅಂಕಗಳದ್ದಾಗಿದ್ದು ಪರೀಕ್ಷೆಯಲ್ಲಿ ಉತ್ತೀರ್ಣತೆಗೆ ಕನಿಷ್ಠ 50 ಅಂಕಗಳನ್ನು ಪಡೆಯತಕ್ಕದ್ದು.

**IV. ಬೆರಳಚ್ಚು ನಕಲುಗಾರರ ಹುದ್ದೆಗಳ ಸಂಖ್ಯೆ: 02**

ಅ) ವೇತನ ಶ್ರೇಣಿ : ರೂ.5800–100–6000–125–6500–150–7100–175–7800–200–8600–225–9500–250–10500 ಹಾಗೂ 40 ರೂ. ವಿಶೇಷ ವೇತನ ನೀಡಲಾಗುವುದು.

| | ವರ್ಗೀಕರಣ | ಪ್ರವರ್ಗ 3 ಎ | ಸಾಮಾನ್ಯ ಅಭ್ಯರ್ಥಿ | ಒಟ್ಟು |
|---|---|---|---|---|
| ಬೆರಳಚ್ಚು ನಕಲುಗಾರರು | ಗ್ರಾಮೀಣ ಅಭ್ಯರ್ಥಿ | | 01 | 01 |
| | ಇತರೆ | 01 | | 01 |
| | **ಒಟ್ಟು** | **01** | **01** | **02** |

**V. ಶೈಕ್ಷಣಿಕ ವಿದ್ಯಾರ್ಹತೆ:**

1) ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ
2) ಸಾರ್ವಜನಿಕ ಶಿಕ್ಷಣ ಇಲಾಖೆ ವತಿಯಿಂದ ನಡೆಸುವ ಕನ್ನಡ ಹಾಗೂ ಆಂಗ್ಲ ಬೆರಳಚ್ಚು ಕಿರಿಯ ದರ್ಜೆ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು ಅಥವಾ ಕರ್ನಾಟಕ ತಾಂತ್ರಿಕ ಪರೀಕ್ಷಾ ಮಂಡಳಿಯು ನಡೆಸುವ ಸೆಕ್ರೆಟರಿಯಲ್ ಪ್ರಾಕ್ಟೀಸ್ ಪಠ್ಯಕ್ರಮದ ಡಿಪ್ಲೋಮಾ ಪದವಿಯೊಂದಿಗೆ ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ವಿಷಯಗಳನ್ನು ಐಚ್ಛಿಕ ವಿಷಯವಾಗಿ ಅಭ್ಯಸಿಸಿರಬೇಕು.

**VI. ಅರ್ಹತಾ ಪರೀಕ್ಷೆ:**

2) ಅಭ್ಯರ್ಥಿಯು ನೇಮಕಾತಿ ಆಯ್ಕೆ ವಿಧಾನ ಪ್ರಾಧಿಕಾರದಿಂದ ನಾಮನಿರ್ದೇಶಿಸಲ್ಪಟ್ಟ ಅಧಿಕಾರಿಯವರಿಂದ ಸುಮಾರು 15 ನಿಮಿಷಗಳ ಕಾಲ ಬೆರಳಚ್ಚು ಮಾಡಲು ನೀಡುವ ಉಕ್ತಲೇಖನವನ್ನು ನೀಡಲಾಗುವುದು. ಈ ಪರೀಕ್ಷೆಯು ಗರಿಷ್ಟ 100 ಅಂಕಗಳದ್ದಾಗಿದ್ದು ಪರೀಕ್ಷೆಯಲ್ಲಿ ಉತ್ತೀರ್ಣತೆಗೆ ಕನಿಷ್ಟ 50 ಅಂಕಗಳನ್ನು ಪಡೆಯತಕ್ಕದ್ದು.

**VII. ಪ್ರೋಸೆಸ್ ಸರ್ವರ್ ಹುದ್ದೆಗಳ ಸಂಖ್ಯೆ: 06**

ವೇತನ ಶ್ರೇಣಿ: ರೂ.5200–100–6000–125–6500–150–7100–7800–200–8200– ಹಾಗೂ ನಿಯಮಾನುಸಾರ ಇತರೆ ಭತ್ಯೆಗಳು

| | ವರ್ಗೀಕರಣ | ಸಾಮಾನ್ಯ ಅಭ್ಯರ್ಥಿ | ಪರಿಶಿಷ್ಟ ಜಾತಿ | ಪ್ರವರ್ಗ 2 ಎ | ಪ್ರವರ್ಗ–1 | ಒಟ್ಟು |
|---|---|---|---|---|---|---|
| ಪ್ರೋಸೆಸ್ ಸರ್ವರ್ | ಗ್ರಾಮೀಣ | 01 | | | | 01 |
| | ಮಹಿಳೆ | 01 | 01 | 01 | 01 | 04 |
| | ಕನ್ನಡ ಮಾಧ್ಯಮ | 01 | | | | 01 |
| | **ಒಟ್ಟು** | **03** | **01** | **01** | **01** | **06** |

**VIII. ಶೈಕ್ಷಣಿಕ ವಿದ್ಯಾರ್ಹತೆ:**

1) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.
2) ಡ್ರೈವಿಂಗ್ ಲೈಸನ್ಸ್ ಹೊಂದಿದ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು.

**IX. ಜವಾನರ ಹುದ್ದೆಗಳ ಸಂಖ್ಯೆ: 09**

ವೇತನ ಶ್ರೇಣಿ: 4800–100–6000–150–6500–150–7100–175–7275

| | ವರ್ಗೀಕರಣ | ಸಾಮಾನ್ಯ ಅಭ್ಯರ್ಥಿ | ಪ್ರವರ್ಗ–2ಎ | ಪ್ರವರ್ಗ–1 | ಪರಿಶಿಷ್ಟ ಜಾತಿ | ಪ್ರವರ್ಗ–3ಬಿ | ಒಟ್ಟು |
|---|---|---|---|---|---|---|---|
| ಜವಾನರು | ಮಹಿಳೆ | 01 | 01 | | | | 02 |
| | ಗ್ರಾಮೀಣ | | 01 | | 01 | | 02 |
| | ಇತರೆ | 02 | | | | | 02 |
| | ಮಾಜಿ ಸೈನಿಕ | 01 | | | | | 01 |
| | ಅಂಗವಿಕಲ/ಇತರೆ | | | 01 | | 01 | 02 |
| | ಒಟ್ಟು | **04** | **02** | **01** | **01** | **01** | **09** |

**X. ಶೈಕ್ಷಣಿಕ ವಿದ್ಯಾರ್ಹತೆ:**

1) 7ನೇ ತರಗತಿಯಲ್ಲಿ ತೇರ್ಗಡೆ ಹೊಂದಿರಬೇಕು ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಮೇಲು ರುಜು ಇರುವ ಅಂಕಪಟ್ಟಿಯ ಜೆರಾಕ್ಸ್ ನಕಲನ್ನು ಹಾಜರುಪಡಿಸತಕ್ಕದ್ದು.

2) ಕನ್ನಡ ಓದಲು ಬರೆಯಲು ತಿಳಿದಿರಬೇಕು.

**XI. ಆಯ್ಕೆ ವಿಧಾನ:**

ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮ ಹಾಗೂ ಅಧೀನ ನ್ಯಾಯಾಲಯಗಳ (ಲಿಪಿಕ ಹಾಗೂ ಇತರ ಹುದ್ದೆಗಳ ನೇಮಕಾತಿ) ನಿಯಮ 1982ರ ಹಾಗೂ 2007 (ತಿದ್ದುಪಡಿ) ನಿಯಮಗಳ ಮೇರೆಗೆ ಅರ್ಹತಾ ಪರೀಕ್ಷೆ ಅಥವಾ ಸ್ಪರ್ಧಾತ್ಮಕ ಪರೀಕ್ಷೆ ಹಾಗೂ ಸಂದರ್ಶನದ ಆಧಾರದ ಮೇಲೆ ನೇಮಕಾತಿ ಮಾಡಲಾಗುವುದು.

ಆ) ಮಾಜಿ ಸೈನಿಕ ಹುದ್ದೆಯು ಅಭ್ಯರ್ಥಿಯು ಲಭ್ಯವಿಲ್ಲದ ಪಕ್ಷದಲ್ಲಿ ಅದೇ ವರ್ಗದಲ್ಲಿ ಇತರೆ ಅಭ್ಯರ್ಥಿಗಳ ಮೂಲಕ ತುಂಬಲಾಗುವುದು.

**XII. ವಯೋಮಿತಿ:**

(ಅ) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಕನಿಷ್ಟ 18 ವರ್ಷ ವಯಸ್ಸನು ಪೂರೈಸಿರತಕ್ಕದ್ದು.

(ಆ) ಅಂಗವಿಕಲ ಹಾಗೂ ವಿಧವಾ ಮಹಿಳೆಯವರಿಗೆ ವಯೋಮಿತಿಯಲ್ಲಿ 10 ವರ್ಷಗಳ ಸಡಿಲಿಕೆ ಇರುತ್ತದೆ.

(ಆ) ಗರಿಷ್ಟ ವಯೋಮಿತಿ:–

| | | |
|---|---|---|
| | ಸಾಮಾನ್ಯ ವರ್ಗ | : 35 ವರ್ಷಗಳು |
| | ಪ್ರವರ್ಗ 3ಎ ಬಿ 2ಎ ಬಿ | : 38 |
| | ಪರಿಶಿಷ್ಟ ಜಾತಿ :<br>ಪರಿಶಿಷ್ಟ ಪಂಗಡ<br>ಪ್ರವರ್ಗ. I | : 40 ವರ್ಷಗಳು |

(ಆ) ಮಾಜಿ ಸೈನಿಕರಿಗೆ ಗರಿಷ್ಟ ವಯೋಮಿತಿ, ಅವನು ಸಶಸ್ತ್ರ ದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವವನೋ ಆ ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳು ಆಗುವುದೋ ಅಷ್ಟು ವರ್ಷಗಳ ಸಡಿಲಿಕೆ.

(ಇ) ಹುಟ್ಟಿದ ದಿನಾಂಕವನ್ನು ತೋರಿಸಿರುವ ಪ್ರಮಾಣ ಪತ್ರದ ಪ್ರತಿಯನ್ನು ಸ್ವಯಂ ದೃಢೀಕರಿಸಿ ಸಲ್ಲಿಸತಕ್ಕದ್ದು.

**XII. ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಕೋರಿದಲ್ಲಿ ಹಾಜರುಪಡಿಸಬೇಕಾದ ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳು:–**

(ಅ) ಸೈನಿಕ ಸೇವೆಯಿಂದ ಬಿಡುಗಡೆಯಾದ : ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ.

(ಆ) ಜಾತಿ ಮೀಸಲಾತಿ ಕೋರುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ತಹಶೀಲ್ದಾರರಿಂದ ಪಡೆದಿರುವ ಪ್ರಮಾಣ ಪತ್ರ

(ಇ) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2 ರಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಬಗ್ಗೆ ಚಾಲ್ತಿ ನಮೂನೆಯಲ್ಲಿರುವ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಪಡೆದು ಸಲ್ಲಿಸತಕ್ಕದ್ದು.

**XIII. ಸಾಮಾನ್ಯ ಸೂಚನೆಗಳು:**

1) ಅಭ್ಯರ್ಥಿಯು ಈ ಅಧಿಸೂಚನೆಯಲ್ಲಿ ಲಗತ್ತಿಸಿದ ನಿಗದಿತ ಅರ್ಜಿ ನಮೂನೆಯಲ್ಲಿ ಬೆರಳಚ್ಚು ಮಾಡಿಸಿದ ಅಥವಾ ಗಣಕೀಕೃತ ಅರ್ಜಿಯನ್ನು ತನ್ನ ಕೈ ಬರವಣಿಗೆಯಲ್ಲಿ ಭರ್ತಿ ಮಾಡಿ ಸಲ್ಲಿಸತಕ್ಕದ್ದು.

2) ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಹಾಗೂ ಮೀಸಲಾತಿಯಡಿಯಲ್ಲಿ ಅರ್ಜಿ ಹಾಕಲು ಬಯಸುವವರು ಆಯಾ ಹುದ್ದೆಗಳಿಗೆ ಪ್ರತ್ಯೇಕವಾಗಿ ನಿಗದಿತ ಅರ್ಜಿ ನಮೂನೆಗಳಲ್ಲಿ ಅರ್ಜಿ ಸಲ್ಲಿಸತಕ್ಕದ್ದು.

3) ಅಭ್ಯರ್ಥಿಯು ಇತ್ತೀಚಿನ ಪಾಸ್‌ಪೋರ್ಟ್ ಸೈಜ್ ಫೋಟೋವನ್ನು ಅರ್ಜಿ ನಮೂನೆಯಲ್ಲಿ ತೋರಿಸಿರುವ ಜಾಗದಲ್ಲಿ ಅಂಟಿಸಿ ಅದರ ಮೇಲೆ ಸಹಿ ಮಾಡತಕ್ಕದ್ದು.

4) ಅರ್ಜಿ ನಮೂನೆಯೊಂದಿಗೆ ಸಲ್ಲಿಸಬೇಕಾಗಿರುವ ಶೈಕ್ಷಣಿಕ ವಿದ್ಯಾರ್ಹತೆಯ ಅಂಕಪಟ್ಟಿಗಳನ್ನು ಹಾಗೂ ಇತರ ಪ್ರಮಾಣ ಪತ್ರಗಳನ್ನು ಸ್ವಯಂ ದೃಢೀಕರಿಸತಕ್ಕದ್ದು ಅರ್ಜಿಯೊಂದಿಗೆ ಮೂಲ ಪ್ರತಿಗಳನ್ನು ಲಗತ್ತಿಸುವ ಅವಶ್ಯಕತೆ ಇರುವುದಿಲ್ಲ. ಲಗ್ತೀಕರಿಸಿದ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸುವ ದಿನಾಂಕದ ಒಳಗೆ ಪಡೆದಿರಬೇಕು.

5) ಅಭ್ಯರ್ಥಿಗಳು ಅರ್ಜಿಯೊಂದಿಗೆ ತಮ್ಮ ನಡತೆ ಮತ್ತು ಶೀಲದ ಬಗ್ಗೆ ತಮ್ಮ ಸಂಬಂಧಿಯಲ್ಲದ ಸಮಾಜದ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ ಎರಡು ಪ್ರಮಾಣ ಪತ್ರಗಳನ್ನು ಹಾಗೂ ಕೊನೆಯಲ್ಲಿ ವ್ಯಾಸಂಗ ಮಾಡಿದ ಶಾಲೆ: ವಿದ್ಯಾಲಯದಿಂದ ಪಡೆದ ಒಂದು ಪ್ರಮಾಣ ಪತ್ರವನ್ನು ಲಗತ್ತಿಸತಕ್ಕದ್ದು.

6) ಅಭ್ಯರ್ಥಿಗಳು ನೇಮಕಾತಿ ಸಂಬಂಧದಲ್ಲಿ ಯಾವುದೇ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅನುಸರಿಸಿರುವುದು ಕಂಡು ಬಂದಲ್ಲಿ ಅಂತಹವರನ್ನು ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ.

7) ಅಪೂರ್ಣವಾಗಿರುವ, ಸಹಿ ಮಾಡದ ಮತ್ತು ವಿದ್ಯಾರ್ಹತೆ, ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಬಗ್ಗೆ ಸಂಬಂಧಪಟ್ಟ ದಾಖಲೆಗಳನ್ನು ಹೊಂದಿರದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

8) ಸರ್ಕಾರಿ ಮತ್ತು ಅರೆ ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ಅರ್ಜಿಗಳನ್ನು ಸಮುಚಿತ ಮಾರ್ಗದ ಮುಖಾಂತರ ಸಲ್ಲಿಸಬೇಕು.

9) ಅಭ್ಯರ್ಥಿಗಳು ತಮ್ಮ ಅರ್ಜಿಯ ಜೊತೆ 5–00 ರೂ.ಗಳ ಸ್ಟಾಂಪು ಲಗತ್ತಿಸಿರುವ ಸ್ವ ವಿಳಾಸವಿರುವ ಲಕೋಟೆಯನ್ನು ಲಗತ್ತಿಸಿರಬೇಕು.

10) ಅರ್ಜಿದಾರರು ಯಾವ ಹುದ್ದೆಗಳಿಗೆ ಅರ್ಜಿಗಳನ್ನು ಸಲ್ಲಿಸುತ್ತಿದ್ದಾರೆಂಬುದನ್ನು ದಪ್ಪ ಅಕ್ಷರಗಳಲ್ಲಿ ಲಕೋಟೆಯ ಮತ್ತು ಅರ್ಜಿಯ ಮೇಲೆ ನಮೂದಿಸಿರಬೇಕು.

11) ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಸಂದರ್ಶನಕ್ಕೆ ಹಾಜರಾಗುವುದು.

12) ಅಭ್ಯರ್ಥಿಗೆ ಸಂದರ್ಶನಕ್ಕೆ ಹಾಜರಾಗಲು ಮಾಹಿತಿ ಸಿಗದಿದ್ದ ಪಕ್ಷದಲ್ಲಿ ಅವರು ಸಂದರ್ಶನಕ್ಕೆ ಹಾಜರಾಗಲು ಅನರ್ಹರೆಂದು ತಿಳಿಯತಕ್ಕದ್ದು. ಈ ಬಗ್ಗೆ ಯಾವುದೇ ಪತ್ರ ವ್ಯವಹಾರಗಳಿಗೆ ಅವಕಾಶವಿರುವುದಿಲ್ಲ.

13) ವಿವರ ತುಂಬಿರುವ ಅರ್ಜಿಗಳನ್ನು ಈ ಕಚೇರಿಯ ವಿರಾಮದ ವೇಳೆಯನ್ನು ಹೊರತುಪಡಿಸಿ ಕೆಲಸದ ವೇಳೆಯಲ್ಲಿ ಮಾತ್ರ ಸ್ವೀಕರಿಸಲಾಗುವುದು.

**ಎಂ.ಎ. ಶಶಿಕಲಾ**

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ

**ಅರ್ಜಿ ನಮೂನೆ**

**ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗರವರ ಅಧಿಸೂಚನೆ ಸಂಖ್ಯೆ 2/2010**

**ದಿ: 26.5.2010 ರ ಮೇರೆಗೆ ____________________ಹುದ್ದೆಗೆ ಅರ್ಜಿಯನ್ನು ಸಲ್ಲಿಸಲಾಗಿದೆ**

**(ಒಂದು ಹುದ್ದೆಗೆ ಮಾತ್ರ ನಮೂದಿಸುವುದು)**

ಇವರಿಗೆ, ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ

| | |
|---|---|
| 1. ಅಭ್ಯರ್ಥಿಯ ಹೆಸರು ಮತ್ತು ತಂದೆಯ ಹೆಸರು (ಬಿಡಿ ಅಕ್ಷರಗಳಲ್ಲಿ) | |
| 2. ಅಭ್ಯರ್ಥಿಯ ಪೂರ್ಣ ವಿಳಾಸ | |

| ಹುದ್ದೆ | ವರ್ಗೀಕರಣ | ಸಾ.ಅ. | ಪ.ಜ. | ಪ.ಪಂ. | ಪ್ರ.ವ. । | ಪ್ರ.ವ 2(ಎ) | ಪ್ರ.ವ. 2(ಬಿ) | ಪ್ರ.ವ.3(ಎ) | ಪ್ರ.ವ.3(ಬಿ) | ಒಟ್ಟು |
|---|---|---|---|---|---|---|---|---|---|---|
| ಬೆರಳಚ್ಚುಗಾರರು | ಗ್ರಾಮೀಣ | 1 | 1 | | | 1 | | | | 3 |
| | ಮಹಿಳೆ | 1 | | 1 | | | 1 | | | 3 |
| | ಯೋ.ಅ. | 1 | | | | | | | | 1 |
| | ಇತರೆ | 1 | 1 | | | | | | | 2 |
| | ಮಾ.ಸೈ. | 1 | | | | | | | | 1 |
| ಬೆರಳಚ್ಚು ನಕಲುಗಾರರು | ಗ್ರಾಮೀಣ | 1 | | | | | | | | 1 |
| | ಇತರೆ | | | | | | | 1 | | 1 |
| ಪ್ರೋಸಸ್ ಸರ್ವರ್ | ಗ್ರಾಮೀಣ | 1 | | | | | | | | 1 |
| | ಮಹಿಳೆ | 1 | 1 | | 1 | 1 | | | | 4 |
| | ಕ.ಮಾ. | 1 | | | | | | | | 1 |

| ಹುದ್ದೆ | ವರ್ಗೀಕರಣ | ಸಾ.ಅ. | ಪ.ಜ. | ಪ.ಪಂ. | ಪ್ರ.ವ. । | ಪ್ರವ 2(ಎ) | ಪ್ರ.ವ. 2(ಬಿ) | ಪ್ರ.ವ.3(ಎ) | ಪ್ರ.ವ.3(ಬಿ) | ಒಟ್ಟು |
|---|---|---|---|---|---|---|---|---|---|---|
| ಜವಾನರು | ಮಹಿಳೆ | 1 | | | | 1 | | | | 2 |
| | ಗ್ರಾಮೀಣ | | 1 | | | 1 | | | | 2 |
| | ಇತರೆ | 2 | | | | | | | | 2 |
| | ಮಾ.ಸೈ. | 1 | | | | | | | | 1 |
| | ಅಂಗವಿಕಲ/ಇತರೆ | | | | 1 | | | | 1 | 2 |
| **ಒಟ್ಟು** | | **13** | **4** | **1** | **2** | **4** | **1** | **1** | **1** | **26** |

3. ಈ ಮೇಲೆ ನಮೂದಿಸಿರುವ ನಾಲ್ಕು ಅಂಕಣದಲ್ಲಿ ಯಾವುದಾದರೂ ಒಂದು ಹುದ್ದೆಗೆ ಅರ್ಜಿ ಸಲ್ಲಿಸಬಹುದಾಗಿದೆ.

ಅ) ಹುದ್ದೆಯ ಹೆಸರು:____________________

ಆ) ವರ್ಗೀಕರಣದಲ್ಲಿರುವ ಅಂಕಣದಂತೆ ಯಾವ ಮೀಸಲಾತಿ, ಪ್ರ.ವರ್ಗ ಅಡಿಯಲ್ಲಿ ಅರ್ಜಿ ಸಲ್ಲಿಸಲಾಗಿದೆ ಎಂಬುದನ್ನು ಮಾತ್ರ ನಮೂದಿಸುವುದು.________________________________

4. ಮೂಲ ಅಂಕಪಟ್ಟಿಯಲ್ಲಿರುವಂತೆ ಯಥಾವತ್ತಾಗಿ ನಮೂದಿಸುವುದು.

(ಎಸ್.ಎಸ್.ಎಲ್.ಸಿ ಮತ್ತು 7ನೇ ತರಗತಿಯವರೆಗೆ)

| ವಿಷಯಗಳು | ಅಂಕಗಳು | ಪಡೆದ ಅಂಕಗಳು | ದರ್ಜೆ/ಶ್ರೇಣಿ (percentage) |
|---|---|---|---|
| ಪ್ರಥಮ ಭಾಷೆ | | | |
| ದ್ವಿತೀಯ ಭಾಷೆ | | | |
| ತೃತೀಯ ಭಾಷೆ | | | |
| ಗಣಿತ | | | |
| ವಿಜ್ಞಾನ | | | |
| ಸಮಾಜ | | | |
| ಒಟ್ಟು ಅಂಕಗಳು | | | |

| | ಅಂಕಗಳು | ಪಡೆದ ಅಂಕಗಳು |
|---|---|---|
| ಕನ್ನಡ ಬೆರಳಚ್ಚು ಕಿರಿಯ ದರ್ಜೆ | | |
| ಆಂಗ್ಲ ಬೆರಳಚ್ಚು ಕಿರಿಯ ದರ್ಜೆ | | |
| ಕನ್ನಡ ಬೆರಳಚ್ಚು ಹಿರಿಯ ದರ್ಜೆ | | |
| ಆಂಗ್ಲ ಬೆರಳಚ್ಚು ಹಿರಿಯ ದರ್ಜೆ | | |

5. ಜನ್ಮ ದಿನಾಂಕ: ____________________ 31.7.2010ಕ್ಕೆ ವಯಸ್ಸು ಎಷ್ಟು ಎಂದು ________________ ಸಲ್ಲಿಸಿರುವ ದಾಖಲೆಯ ಅನ್ವಯ ________________ ಪಕ್ಕದ ಅಂಕಣದಲ್ಲಿ ನಮೂದಿಸುವುದು____________________________

| | |
|---|---|
| 6. ಅಭ್ಯರ್ಥಿಯ ತಂದೆಯ/ಗಂಡನ/ಪೋಷಕರ ಹೆಸರು ಮತ್ತು ವೃತ್ತಿ | |
| 7. ಅಭ್ಯರ್ಥಿಯು ಪುರುಷ/ ಸ್ತ್ರೀ ಅಂಗವಿಕಲ / ವಿಧವೆ / ವಿವಾಹಿತರೇ? | |
| 1. ಅಭ್ಯರ್ಥಿ ಹುಟ್ಟಿದ ದಿನಾಂಕದ ಬಗ್ಗೆ ಸಲ್ಲಿಸಿದ ದೃಢೀಕರಣ ಪತ್ರ | |
| 2. ಹುಟ್ಟಿದ ಸ್ಥಳ: ಗ್ರಾಮ/ ಪಟ್ಟಣ/ ತಾಲ್ಲೂಕು/ಜಿಲ್ಲೆ | |
| 3. ಅಭ್ಯರ್ಥಿಯು ಯಾವ ಜಾತಿಗೆ ಸೇರಿದ್ದಾರೆ?<br>ಪರಿಶಿಷ್ಟ ಜಾತಿ / ಪ್ರ.ವರ್ಗ 2–ಎ, 3–ಎ ಸೇರಿದ್ದ ಪಕ್ಷದಲ್ಲಿ ಹಾಗೂ ಯಾವುದೇ ಮೀಸಲಾತಿ ಬಯಸಿದ ಪಕ್ಷದಲ್ಲಿ ಸಕ್ಷಮ ಪ್ರಾಧಿಕಾರದಿಂದ | |

| | |
|---|---|
| ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರದ ಸ್ವದೃಢೀಕೃತ ದಾಖಲೆ ಲಗತ್ತಿಸತಕ್ಕದ್ದು. | |
| 4. ಗ್ರಾಮೀಣ ಅಭ್ಯರ್ಥಿ / ಯೋಜನಾ ನಿರಾಶ್ರಿತ/ಮಾಜಿ ಸೈನಿಕರು/ ಅಂಗವಿಕಲ/ ಕನ್ನಡ ಮಾಧ್ಯಮ ಆಗಿದ್ದಲ್ಲಿ ನಿಗದಿತ ನಮೂನೆಯಲ್ಲಿ ಸ್ವದೃಢೀಕೃತ ದಾಖಲಾತಿ ಲಗತ್ತಿಸತಕ್ಕದ್ದು. | |
| 5. ಅಡಕಗಳು (ಲಗತ್ತಿಸಿದ ಸ್ವದೃಢೀಕೃತ ದಾಖಲಾತಿಗಳನ್ನು) ವಿವರವಾಗಿ ಬರೆಯುವುದು | |

**ಅಭ್ಯರ್ಥಿಯ ಸ್ವಯಂ ಘೋಷಣೆ**

ಮೇಲ್ಕಂಡ ವಿವರಣೆಗಳು ಸತ್ಯವಾಗಿರುತ್ತವೆ ಹಾಗೂ ಸರಿಯಾಗಿರುತ್ತವೆ. ಮೇಲೆ ಹೇಳಿದ ಮಾಹಿತಿಗಳು ಸುಳ್ಳು ಎಂದು ತಿಳಿದು ಬಂದಲ್ಲಿ ಕಾನೂನು ರೀತಿಯ ಸೂಕ್ತ ಕ್ರಮ ಕೈಗೊಳ್ಳಬಹುದು ಎಂದು ಘೋಷಿಸುತ್ತೇನೆ.

ಸ್ಥಳ: ಅಭ್ಯರ್ಥಿಯ ಹೆಸರು ಮತ್ತು ಸಹಿ

ದಿನಾಂಕ:

ಕ್ರಮ ಸಂಖ್ಯೆ–3 ರಲ್ಲಿ ನಮೂದಿಸಿದ ಸಲುವಾಗಿ:

ಅ) ಹುದ್ದೆಯ ಹೆಸರು________________ಈ ಸ್ಥಳದಲ್ಲಿ (ಬೆರಳಚ್ಚುಗಾರರು ಬೆರಳಚ್ಚು–ನಕಲುಗಾರರು, ಪ್ರೊಸಸ್–ಸರ್ವರ್, ಜವಾನರು) ಇವುಗಳಲ್ಲಿ ಒಂದು ಹುದ್ದೆಯ ಹೆಸರನ್ನು ಮಾತ್ರ ನಮೂದಿಸಬೇಕು.

ಆ) ________ ಈ ಸ್ಥಳದಲ್ಲಿ ಸಾ.ಅ. ಎಂದರೆ ಸಾಮಾನ್ಯ ಅಭ್ಯರ್ಥಿ, ಮ.ಅ. ಮಹಿಳಾ ಅಭ್ಯರ್ಥಿ, ಪ.ಜಾ ಎಂದರೆ ಪರಿಶಿಷ್ಟ ಜಾತಿ ಅಭ್ಯರ್ಥಿ, ಪ.ಪಂ. ಅಂದರೆ ಪರಿಶಿಷ್ಟ ಪಂಗಡ, ಗ್ರಾ.ಅ. ಎಂದರೆ ಗ್ರಾಮೀಣ ಅಭ್ಯರ್ಥಿ, ಪ್ರ.ವ. 1, 2ಎ, 2ಬಿ, 3ಎ ಮತ್ತು 3ಬಿ ಎಂದರೆ ಪ್ರವರ್ಗ 1, 2ಎ, 2ಬಿ, 3ಎ ಮತ್ತು 3ಬಿ, ಯೋ.ಅ. ಎಂದರೆ ಯೋಜನಾ ನಿರಾಶ್ರಿತ ಅಭ್ಯರ್ಥಿ, ಮಾ.ಅ. ಮಾಜಿ ಸೈನಿಕರು, ಕ.ಮಾ. ಕನ್ನಡ ಮಾಧ್ಯಮ ಎಂದು ಭಾವಿಸಿಕೊಳ್ಳತಕ್ಕದ್ದು.

ಪಿ.ಆರ್. 381

**ಚಿತ್ರದುರ್ಗ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಚೇರಿ**

**ಅಧಿಸೂಚನೆ ಸಂಖ್ಯೆ: 01/10 ದಿನಾಂಕ: 28ನೇ ಏಪ್ರಿಲ್ 2010**

**ವಿಷಯ:** ಚಿತ್ರದುರ್ಗ ನ್ಯಾಯಾಂಗ ಘಟಕದಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರ ಹುದ್ದೆಗಳ ನೇಮಕಾತಿ ಬಗ್ಗೆ.

**ಉಲ್ಲೇಖ:** 1. ಗೌರವಾನ್ವಿತ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: ಎಲ್‌ಸಿಎ–II–205/05, ದಿನಾಂಕ: 2.5.2008.

2. ಗೌರವಾನ್ವಿತ ಉಚ್ಚ ನ್ಯಾಯಾಲಯದ ಇವರ ಅಧಿಸೂಚನೆ ಸಂಖ್ಯೆ: ಎಲ್‌ಸಿಎ–I/220/96, ದಿನಾಂಕ: 8.3.2010.
3. ಸರ್ಕಾರಿ ಅಧಿಸೂಚನೆ ಸಂಖ್ಯೆ: ಎಲ್‌ಎಡಬ್ಲ್ಯು 144/ಎಲ್‌ಎಸಿ 2009, ದಿನಾಂಕ: 6.8.09.
4. ಸರ್ಕಾರಿ ಅಧಿಸೂಚನೆ ಸಂಖ್ಯೆ: ಎಲ್‌ಎಡಬ್ಲ್ಯು 144/ಎಲ್‌ಎಸಿ 2009, ದಿ: 2.11.09.
5. ಸರ್ಕಾರಿ ಅಧಿಸೂಚನೆ ಸಂಖ್ಯೆ: 137 ಎಲ್‌ಎಸಿ 2005, ದಿ: 25.3.2008.
6. ಈ ಕಚೇರಿ ಅಧಿಸೂಚನೆ ಸಂಖ್ಯೆ: 1/08, ದಿನಾಂಕ: 23.6.2008.
7. ಈ ಕಚೇರಿ ಅಧಿಸೂಚನೆ ಸಂಖ್ಯೆ 1/09, ದಿನಾಂಕ: 18.4.09.
8. ಈ ಕಚೇರಿ ಟಿಪ್ಪಣಿ ಹಾಗೂ ದಿನಾಂಕ 28.4.2010 ರ ಟಿಪ್ಪಣಿ ಮೇಲಿನ ಆದೇಶ.

**ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ 15.6.2010 ಸಂಜೆ 5.00 ಗಂಟೆವರೆಗೆ**

ಅರ್ಜಿ ಸಲ್ಲಿಸಬೇಕಾದ ವಿಳಾಸ: ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಜಿಲ್ಲಾ ನ್ಯಾಯಾಲಯ, ಚಿತ್ರದುರ್ಗ, ಚಿತ್ರದುರ್ಗ ಜಿಲ್ಲೆ

**I. ಶೀಘ್ರಲಿಪಿಗಾರರ ಹುದ್ದೆ: (Stenographers)**

ಖಾಲಿ ಹುದ್ದೆಗಳ (Provisionaly) ಸಂಖ್ಯೆ: – 04

II. ವೇತನ ಶ್ರೇಣಿ: 7275–175–7800–200–800–225–9500–250–10500–300–12300–350–13350– ಇತರೆ ಭತ್ಯೆಗಳೊಂದಿಗೆ

III. **ಹುದ್ದೆಗಳ ವರ್ಗೀಕರಣ:–**

| | ಪರಿಶಿಷ್ಟ ಜಾತಿ | ಸಾಮಾನ್ಯ ಅಭ್ಯರ್ಥಿ | ಪ್ರವರ್ಗ 3ಎ | ಒಟ್ಟು |
|---|---|---|---|---|
| ಗ್ರಾಮೀಣ ಅಭ್ಯರ್ಥಿ | 01* | 02 | | 03 |
| ಇತರೆ | | | 01 | 01 |
| **ಒಟ್ಟು** | **01** | **02** | **01** | **04** |

IV. **ಶೈಕ್ಷಣಿಕ ವಿದ್ಯಾರ್ಹತೆ:**

(1) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ

(2) ಕರ್ನಾಟಕ ಸಾರ್ವಜನಿಕ ಶಿಕ್ಷಣ ಇಲಾಖೆಯು ನಡೆಸುವ ಪ್ರೌಢ ದರ್ಜೆಯ ಕನ್ನಡ ಮತ್ತು ಆಂಗ್ಲ ಭಾಷೆಗಳ ಶೀಘ್ರಲಿಪಿ ಮತ್ತು ಬೆರಳಚ್ಚು ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ

(3) ಕರ್ನಾಟಕ ತಾಂತ್ರಿಕ ಪರೀಕ್ಷಾ ಮಂಡಳಿಯು ನಡೆಸುವ ಸೆಕ್ರೆಟರಿಯಲ್ ಪ್ರ್ಯಾಕ್ಟೀಸ್ ಪಠ್ಯಕ್ರಮದ ಡಿಪ್ಲೋಮಾ ಪದವಿಯೊಂದಿಗೆ ಕನ್ನಡ ಮತ್ತು ಆಂಗ್ಲ ಭಾಷೆಗಳ ಶೀಘ್ರಲಿಪಿ ಮತ್ತು ಬೆರಳಚ್ಚು ವಿಷಯಗಳನ್ನು ಐಚ್ಛಿಕ ವಿಷಯಗಳನ್ನಾಗಿ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

V. **ವಯೋಮಿತಿ:**

(ಅ) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಕನಿಷ್ಠ 18 ವರ್ಷ ವಯಸ್ಸನು ಪೂರೈಸಿರತಕ್ಕದ್ದು.

(ಆ) ಗರಿಷ್ಠ ವಯೋಮಿತಿ:– ಸಾಮಾನ್ಯ ವರ್ಗ : 35 ವರ್ಷಗಳು
ಪರಿಶಿಷ್ಟ ಜಾತಿ : 40 ವರ್ಷಗಳು
ಪ್ರವರ್ಗ 3ಎ : 38 ವರ್ಷಗಳು

**(1) ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಕೋರಿದಲ್ಲಿ ಹಾಜರು ಪಡಿಸಬೇಕಾದ ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳು:**

(ಅ) ಮೀಸಲಾತಿ ಕೋರುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ತಹಶೀಲ್ದಾರರಿಂದ ಪಡೆದಿರುವ ಜಾತಿ ಮತ್ತು ಆದಾಯ ಪ್ರಮಾಣ ಪತ್ರ ಪಡೆದ ಜೆರಾಕ್ಸ್ ಪ್ರತಿಗಳನ್ನು ಲಗತ್ತಿಸುವುದು. (ಪರಿಶಿಷ್ಟ ಜಾತಿ ಹಾಗೂ ಪ್ರವರ್ಗ 3ಎ)

(ಆ) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2 ರಲ್ಲಿ ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರದ ಜೆರಾಕ್ಸ್ ಪ್ರತಿಯನ್ನು ಲಗತ್ತಿಸುವುದು.

(ಅರ್ಜಿಯೊಂದಿಗೆ ಮೂಲ ಪ್ರತಿಗಳನ್ನು ಲಗತ್ತಿಸುವ ಅವಶ್ಯಕತೆ ಇರುವುದಿಲ್ಲ).

VI. **ಅರ್ಹತಾ ಪರೀಕ್ಷೆ:**

1. ಅಭ್ಯರ್ಥಿಯು ನೇಮಕಾತಿ ಪ್ರಾಧಿಕಾರದಿಂದ ನಿರ್ದೇಶಿಸಲ್ಪಟ್ಟ ಪರೀಕ್ಷಕರು ಪ್ರತಿ ನಿಮಿಷಕ್ಕೆ 120 ಪದಗಳ ವೇಗದಂತೆ 5 ನಿಮಿಷಗಳಲ್ಲಿ ನೀಡುವ ಉಕ್ತಲೇಖನವನ್ನು ಸುಮಾರು 45 ನಿಮಿಷಗಳಲ್ಲಿ ಲಿಪ್ಯಂತರಿಸತಕ್ಕದ್ದು.
2. ಈ ಪರೀಕ್ಷೆಯು ಗರಿಷ್ಠ 100 ಅಂಕಗಳದ್ದಾಗಿದ್ದು ಪರೀಕ್ಷೆಯಲ್ಲಿ ಉತ್ತೀರ್ಣತೆಗೆ ಕನಿಷ್ಠ 50 ಅಂಕಗಳನ್ನು ಪಡೆಯತಕ್ಕದ್ದು.

VII. **ಆಯ್ಕೆ ವಿಧಾನ:**

ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮ ಹಾಗೂ ಅಧೀನ ನ್ಯಾಯಾಲಯಗಳ (ಲಿಪಿಕ ಹಾಗೂ ಇತರ ಹುದ್ದೆಗಳ ನೇಮಕಾತಿ) ನಿಯಮ 1982ರ ಹಾಗೂ 2007 (ತಿದ್ದುಪಡಿ) ನಿಯಮಗಳ ಮೇರೆಗೆ ಅರ್ಹತಾ ಪರೀಕ್ಷೆ ಅಥವಾ ಸ್ಪರ್ಧಾತ್ಮಕ ಪರೀಕ್ಷೆ ಹಾಗೂ ಸಂದರ್ಶನದ ಆಧಾರದ ಮೇಲೆ ನೇಮಕಾತಿ ಮಾಡಲಾಗುವುದು.

VIII. **ಸಾಮಾನ್ಯ ಸೂಚನೆಗಳು:**

1) ಅಭ್ಯರ್ಥಿಯು ಈ ಅಧಿಸೂಚನೆಯಲ್ಲಿ ಲಗತ್ತಿಕರಿಸಿದ ನಿಗದಿತ ಅರ್ಜಿ ನಮೂನೆಯಲ್ಲಿ ಬೆರಳಚ್ಚು ಮಾಡಿಸಿದ ಅಥವಾ ಗಣಕೀಕೃತ ಅರ್ಜಿಯನ್ನು ತನ್ನ ಕೈ ಬರವಣಿಗೆಯಲ್ಲಿ ಭರ್ತಿ ಮಾಡಿ ಸಲ್ಲಿಸತಕ್ಕದ್ದು.

2) ಅಭ್ಯರ್ಥಿಯು ಇತ್ತೀಚಿನ ಪಾಸ್‌ಪೋರ್ಟ್ ಸೈಜ್ ಫೋಟೋವನ್ನು ಅರ್ಜಿ ನಮೂನೆಯಲ್ಲಿ ತೋರಿಸಿರುವ ಜಾಗದಲ್ಲಿ ಅಂಟಿಸಿ ಅದರ ಮೇಲೆ ಸಹಿ ಮಾಡತಕ್ಕದ್ದು.

